## 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಪ್ರಾರ್ಥಿಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

850 ಶ್ರೀ ಎಂ. ಜಿ. ನಂಜುಂಡಯ್ಯ
ಹಿಂದಿಪಂಡಿತ್
ಗಾ॥ ವಿದ್ಯಾರ್ಥಿನಿಯರ
ಪ್ರೌಢಶಾಲೆ, ತಿಪಟೂರು,
ತುಮಕೂರು ಜಿಲ್ಲೆ

851 ಶ್ರೀ ಎನ್. ಜಿ. ಚಂದ್ರಶೇಖರ
ಶಿಕ್ಷಕರು, ನೆಲ್ಲಿಗೆ,
ಅರಸೀಕೆರೆ ತಾ॥
ಹಾಸನ ಜಿಲ್ಲೆ

852 ಶ್ರೀ ಕೆ. ಆರ್. ರಾಮಣ್ಣ
ಕೆ. ಆರ್. ಮೊಹಲ್ಲ,
ಮೈಸೂರು.

853 ಶ್ರೀ ಪಿ. ವಿ. ಗುರುಸಿದ್ದಪ್ಪ & ಸನ್ಸ್, ನಜರಾಬಾದ್,
ಮೈಸೂರು

854 ಶ್ರೀ ಎಂ. ಹೆಚ್. ವಿವೇಕಾನಂದ
ಜೆ. ಬಿ. ಎಕ್ಸ್‌ಟೆನ್ಷನ್
ದಾವಣಗೆರೆ

855 ಶ್ರೀ ಬಿ. ಎಸ್. ಶಿವಶಂಕರ್, ಬಿ. ಎ.
S/o ಶಿವಣ್ಣ
ಕೊಡಗಿಹಳ್ಳಿ
ತುರುವೇಕೆರೆ ತಾ॥
ತುಮಕೂರು ಜಿಲ್ಲೆ.

856 ಶ್ರೀ ಟಿ. ಬಸವರಾಜು
S/o ಅಂಗಡಿ ತಿಪ್ಪೆರುದ್ರಪ್ಪ
ಕುರುಡಿಹಳ್ಳಿ
ಚಳ್ಳಕೆರೆ ತಾ॥
ಚಿತ್ರದುರ್ಗ ಜಿಲ್ಲೆ

857 ಶ್ರೀ ಸಿದ್ಧಗಂಗಾ ಪ್ರೌಢಶಾಲೆ,
ತುಮಕೂರು.

858 ಶ್ರೀ ಕೆ. ಜಿ. ನಂಜುಂಡಪ್ಪ
ಗುರುಕೃಪ,
ಹಿಂದೂಪುರ (ಆಂಧ್ರಪ್ರದೇಶ)

859 ಶ್ರೀ ಶಿವರುದ್ರಾರಾಧ್ಯ
ರಾಜಾಜಿನಗರ,
ಬೆಂಗಳೂರು-10

# ಸಿದ್ಧಗಂಗಾ

ಸಂಪುಟ–೧೭ ಸಂಚಿಕೆ - ೮ ಜುಲೈ, ೧೯೮೧

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

  

ಸಕಳ ನಿಷ್ಕಳ ಕೂಡಿಕೊಂಡಿಪ್ಪೆಯಾಗಿ
ಸಕಳ ನೀನೇ, 'ನಿಷ್ಕಳ ನೀನೆ ಕಂಡಯ್ಯ !'
'ವಿಶ್ವತಃಚಕ್ಷು' ನೀನೇ ದೇವಾ ವಿಶ್ವತೋಮುಖ,'
ನೀನೇ ದೇವಾ,

'ವಿಶ್ವತೋ ಬಾಹು' ನೀನೇ ದೇವಾ, ಕೂಡಲ ಸಂಗಮದೇವಾ !
ನೀನು ನಿರಾಕಾರ ಸಾಕಾರವೆಂಬೆರಡು ಮೂರ್ತಿಯ
ಧರಿಸಿಪ್ಪೆಯಾಗಿ,

ಒಂದು ಜರಿದು ಒಂದು ಹಿಡಿದಿಹೆನೆಂದರೆ
ಅದೇ ಕೊರತೆ ನೋಡಾ ಪ್ರಭುವೆ,
ಕೂಡಲ ಸಂಗಮ ದೇವಾ.

—ಬಸವಣ್ಣ

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1981 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ, ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

" ಕುಕ್ಷೌಸ್ಥಿತಿಸ್ಮೃತಿ ಯಸ್ಯಾನ್ನಂ ತಸ್ಯಬುದ್ಧಿಃ ಪ್ರಜಾಯತೇ"

ಮಹಾಭಾರತ ಪ್ರಸಂಗಃ ಯುದ್ಧ ಮುಗಿದಿದೆ; ಬಂಧು-ಬಾಂಧವರೆಲ್ಲಾ ಹತರಾಗಿದ್ದಾರೆ. ಇದನ್ನು ನೋಡಿ ಧರ್ಮರಾಯ ಬಹಳವಾಗಿ ಕಳವಳಗೊಂಡ. ಕೂಡಲೆ ಪತಿ-ಸೋದರರೊಡಗೂಡಿ ಭೀಷ್ಮರ ಬಳಿ ಬಂದ. ಎಲ್ಲರೂ ಉಪದೇಶ ಬೇಡಿ, ಅವನ ಕಾಲಡಿ ಭಯಭಕ್ತಿಯಿಂದ ಕುಳಿತರು. ಇದನ್ನು ನೋಡಿ ದ್ರೌಪದಿ ಗಹಗಹಿಸಿ ನಕ್ಕಳು. ಎಲ್ಲರೂ ಅವಾಕ್ಕಾದರು!! ಧರ್ಮರಾಯ ಕೇಳಿದ- 'ಏನು ದ್ರೌಪದಿ ! ಪಿತಾಮಹರೆದುರಿನಲ್ಲಿ ನಿನ್ನ ಕುಚೋದ್ಯ ?'. ದ್ರೌಪದಿ ಉತ್ತರ ಕೊಟ್ಟಳು- 'ನಾನು ನಕ್ಕದ್ದು ನ್ಯಾಯಬದ್ಧವಾಗಿಯೇ ಇದೆ. ಇದರಲ್ಲಿ ಕುಚೋದ್ಯವೇನೂ ಇಲ್ಲ. ಏಕೆಂದರೆ ಈ ನಿಮ್ಮ ಪಿತಾಮಹರಿಗೆ ಉಪದೇಶ ಮಾಡುವ ಹಕ್ಕು ಎಳ್ಳಷ್ಟೂ ಇಲ್ಲ. ಕಾರಣ : ತುಂಬಿದ ಸಭೆಯಲ್ಲಿ, ಹೆಣ್ಣೊಬ್ಬಳ ಸೀರೆ ಸೆಳೆದು ಅವಮಾನ ಮಾಡುತ್ತಿದ್ದಾಗ ಈ ಅಧಿಕಾರ ಎಲ್ಲಿ ಹೋಗಿತ್ತು'-? ಆಗ ಭೀಷ್ಮರು- 'ತಾಯಿ ! ನಿನ್ನ ಮಾತ ನಿಜ. ನಾನಂದು ದುರ್ಯೋಧನನ ಅನ್ನದ ಋಣದ ಗಾಳದಲ್ಲಿ ಸಿಕ್ಕಿದ್ದೆ. ನನ್ನ ತನು ಮನ ಭಾವಗಳು ಶುದ್ಧವಾಗಿರಲಿಲ್ಲ. ಆದ್ದರಿಂದ ಅಂದು ಉಪದೇಶ ಮಾಡುವ ಅಧಿಕಾರವಿರಲಿಲ್ಲ. ಆದರೆ ಇಂದು ಅವನ ಅನ್ನದ ಋಣದಿಂದ ವಿಮುಕ್ತನಾಗಿದ್ದೇನೆ. ತನು ಮನ ಭಾವಗಳು ಶುದ್ಧವಾಗಿವೆ. ಆದ್ದರಿಂದ ಇಂದು ಉಪದೇಶವನ್ನು ಮಾಡುವ ಅಧಿಕಾರ ಹೊಂದಿದ್ದೇನೆ'- ಎನ್ನುತ್ತಾರೆ.

ಪ್ರಸಂಗವೇನೇ ಇರಲಿ, ತಿಂದ ಅನ್ನ ಬುದ್ಧಿಯ ಮೇಲೆ ಹೇಗೆ ಪ್ರಭಾವ ಬೀರುತ್ತದೆಂಬುದು ಮುಖ್ಯ. ಆದುದರಿಂದ ನಾವು ತಿನ್ನುವ ಅನ್ನ ಶುದ್ಧವಾಗಿರಬೇಕು ಸಾತ್ವಿಕವಾಗಿರ ಬೇಕು.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

**ಸಂಪಾದಕ ಮಂಡಲಿ**

ಪಂ॥ ಚನ್ನಪ್ಪ ಎರೇಸೀಮೆ

ಪಿ. ಎನ್. ಚಂದ್ರಶೇಖರಯ್ಯ

ಬಸವರಾಜು

ಜಾಹಿರಾತು ಕಾರ್ಯದರ್ಶಿ

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

**ಚಂದಾ ವಿವರ**

ಆಜೀವ ಸದಸ್ಯತ್ವ 151-00 ರೂ

ವಾರ್ಷಿಕ ಚಂದಾ 12-00 ರೂ

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ—572104

ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ, ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರೆಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ವ್ಯಕ್ತಿಸ್ವಾತಂತ್ರ್ಯ - ಆರ್ಥಿಕ ಸ್ವಾತಂತ್ರ್ಯಕ್ಕಾಗಿ ರಾಜಕೀಯ ಸ್ವಾತಂತ್ರ್ಯ ಅಗತ್ಯ ಎಂದರು ಗಾಂಧೀಜಿಯವರು. ಆ ಮಾತನ್ನೇ ಮುಂದುವರಿಸುತ್ತಾ ಯಾವುದೇ ರಾಷ್ಟ್ರದ ಸ್ವಾತಂತ್ರ್ಯವು ಅರ್ಥವತ್ತಾಗಬೇಕಾದರೆ ಆ ದೇಶದ ಜನತೆಗೆ ಎರಡು ಹೊತ್ತಿನ ಊಟ ದೊರೆತಾಗ ಮಾತ್ರ ಎಂದಿದ್ದಾರೆ. ನಮ್ಮ ದೇಶ ಬಡದೇಶ ಎಂದು ಹೇಳಿ ಕೊಳ್ಳುವಮಾತು ಶತಮಾನ ಕಳೆದರೂ ತಪ್ಪುವಂತಿಲ್ಲವೆಂಬ ಕೊರಗಾಗಿದೆ. ಒಂದು ಕಡೆ ಸರಕಾರ ನಾವು ಇಂದು ಆಹಾರದಲ್ಲಿ ಸ್ವಾವಲಂಬನೆಯನ್ನು ಸಾಧಿಸಿದ್ದೇವೆ ಎಂದರೆ ಮತ್ತೊಂದೆಡೆ ಸು. 306 ದಶಲಕ್ಷ ಮಂದಿ ಬಡತನದ ಗೆರೆಯ ಕೆಳಗೇ ಜೀವನ ನಡೆ ಸುತ್ತಿದ್ದಾರೆ ಎನ್ನುವ ತಜ್ಞರ ಅಂಕೆ ಅಂಶ. ಒಪ್ಪತ್ತಿನ ತುತ್ತಿನ ಚೀಲವನ್ನು ತುಂಬಿಸಿ ಕೊಳ್ಳಲು ಎಂಜಲನ್ನಕ್ಕಾಗಿ ನಾಯಿಗಳೊಡನೆ ಹೋರಾಡುವ ದೃಶ್ಯವಾದರೆ, ಊಟ ಒಂದಕ್ಕೆ ನೂರಾರು ರೂಪಾಯಿಗಳ ವೆಚ್ಚಮಾಡುವ ಲಂಚಾವತಾರಿಗಳ ಪಂಚತಾರ ಹೋಟೆಲುಗಳಲ್ಲಿನ ಸಂತೋಷಕೂಟ. ಬಡವನ ಶೋಷಣೆಯಿಂದ ಗಳಿಸಿದ ಧನಿಕನ ಹಣ ಒಟ್ಟಿಗೇ ಒಂದು ಕಡೆ ಸೇರಿ ಖರ್ಚು ಮಾಡುವ ಮಾರ್ಗವನ್ನು ಹುಡುಕುತ್ತಿದೆ. ಇದರ ಜೊತೆಗೆ ಪರರಾಷ್ಟ್ರಗಳ ಮತ್ತು ವಿಧರ್ಮೀಯರ ಸಮಸ್ಯೆ ನಮಗೆ ಹೊಸದೇನಲ್ಲ. ಅಸ್ಪೃಶ್ಯತೆ ಹಿಂದೂ ಧರ್ಮಕ್ಕೊಂದು ದೊಡ್ಡ ಕಳಂಕವೆಂಬ ರಾಷ್ಟ್ರಪಿತನ ಮಾತನ್ನು ಅಲಕ್ಷ್ಯಮಾಡುತ್ತಾ ಬಂದದ್ದೇ ಈ ವಿಪತ್ತಿಗೆ ಕಾರಣ. ನಮ್ಮವರ ತಿರಸ್ಕಾರ ವಿಧರ್ಮೀ ಯರ ಬಲಾತ್ಕಾರದ ಆಮಿಷಕ್ಕೆ ಸಹಾಯಕವಾಗಿದೆ. ನಮ್ಮ ಅಲಕ್ಷದಿಂದಲೇ ನಮ್ಮವರೇ ನಮಗೆ ಶತ್ರುಗಳಾಗಬೇಕಾದ ಪ್ರಸಂಗ ಒದಗಿತು. ಹೊರಗಿನ ಆಪತ್ತುಗಳಿಗಿಂತ ಒಳಗಿನ ಆಪತ್ತು ಸಂಪೂರ್ಣ ಅನರ್ಥಕ್ಕೆ ಅವಕಾಶ ಮಾಡಿ ಕೊಡುತ್ತದೆ. ಆದ್ದರಿಂದ ದೇಶಸೇವೆ ಮಾಡಬೇಕೆನಿಸುವವರು ಸ್ವಾಮಿ ವಿವೇಕಾನಂದರು 'ದರಿದ್ರ ದೇವೋಭವ ಎಂದು ಹೇಳಿ ದಂತೆ ದೀನದಲಿತರ ಪತಿತರ, ಅಸ್ಪೃಶ್ಯರ ಸೇವೆಗೈಯಲಿ. ಅಸ್ಪೃಶ್ಯತೆಯ ಪಾಶವೀ ಬಂಧನದಿಂದ ಬಿಡುಗಡೆಮಾಡಿ'ಇವ ನಮ್ಮವ ಇವ ನಮ್ಮವ'ಎಂದು ಘೋಷಿಸಿ ಆಚರಿಸಿ ತೋರಿಸಿದ ಬಸವಣ್ಣನವರ ಸಂದೇಶವನ್ನು ಅರಿತು ಆಚರಿಸಲಿ. ಬಸವಣ್ಣ ದೀನದಲಿತ ರನ್ನು ಅಪ್ಪಿಕೊಂಡಂತೆ ಅಪ್ಪಿಕೊಳ್ಳಲಿ. ಸಂಘ ಸಂಸ್ಥೆಗಳು ಧರ್ಮ ಗುರುಗಳು ಮಠಾಧಿ ಪತಿಗಳ ಕಾರ್ಯ ಅಸ್ಪೃಶ್ಯತೆಯು ಹಿಂದೂ ಧರ್ಮಕ್ಕೊಂದು ದೊಡ್ಡ ಕಳಂಕವೆಂಬ ಗಾಂಧೀಜಿಯವರ ಹಳೆಯ ಕೂಗಿಗೆ ಹೊಸ ಚೈತನ್ಯವನ್ನು ಕೊಡಲಿ. ಜಗತ್ತಿನ ಧರ್ಮ ಶಾಂತಿ ಸಂದೇಶಕ್ಕೆ ಹಿಂದೂ ಧರ್ಮ ಮತ್ತು ದೇಶದ ಕೊಡುಗೆ ಅಪಾರವಾದುದು. ಹಿಂದೂ ಧರ್ಮಕ್ಕೆ ಮತ್ತು ಶಾಂತಿ ಸಂದೇಶಕ್ಕೆ ವಿನಾಶ ತಟ್ಟಿದದಿನ ಇಡೀ ಜಗತ್ತಿಗೆ ವಿನಾಶ ಎಂಬ ಮಾತನ್ನು ಜಗತ್ತಿನ ಶಾಂತಿ ದೂತರು ಇಂದು ಚಿಂತಿಸಬೇಕಾದುದು ಅಗತ್ಯವಾಗಿದೆ.

ಆಗಸ್ಟ್, 1981

# ನವನೀತ

**ಸುಭಿಕ್ಷಂ ಕೃಷಕೇ ನಿತ್ಯಂ ನಿತ್ಯಂ ಸುಖಮರೋಗಿಣಿ ।**
**ಭಾರ್ಯಾ ಭರ್ತುಃ ಪ್ರಿಯಾ ಯಸ್ಯ ತಸ್ಯನಿತ್ಯೋತ್ಸವಂ ಗೃಹಮ್ ॥**

ವ್ಯವಸಾಯಗಾರನಿಗೆ ನಿತ್ಯವೂ ಸುಭಿಕ್ಷವೇ, ರೋಗವಿಲ್ಲದಿರುವವನಿಗೆ ನಿತ್ಯ ಸುಖ. ಪ್ರಿಯೆಯಾದ ಪತ್ನಿಯುಳ್ಳವನ ಮನೆಯಲ್ಲಿ ನಿತ್ಯೋತ್ಸವ.

—ಸುಭಾಷಿತರತ್ನ ಭಾಂಡಾಗಾರ

○ ○ ○

**ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ನರಃ ।**
**ದಂಡಸ್ಯ ಹಿ ಭಯಾತ್ಸರ್ವಂ ಜಗದ್ಭೋಗಾಯ ಕಲ್ಪತೇ ॥**

ಸರ್ವಜನರನ್ನು ದಂಡದಿಂದಲೇ ವಶಪಡಿಸಿಕೊಳ್ಳಬೇಕು. ಏಕೆಂದರೆ ಮಾನವರಲ್ಲಿ ಪ್ರಾಮಾಣಿಕನೂ ಶುದ್ಧನೂ ವಿರಳ, ದಂಡದ ಭಯವಿದ್ದರೆ ಜಗತ್ತಿನಲ್ಲಿ ಸುಖವನ್ನು ಅನುಭವಿಸ ಬಹುದು.

—ಮನುಸ್ಮೃತಿ

○ ○ ○

**ಯದ್ಯುಚ್ಚೈರಪಿ ನ ಪರಾನುಕಂರುಷೇ ತನ್ಮೃಷೈವ ತೇ ಜನ್ಮ ।**
**ಯದಿನ್ನೈಷ ಜನಿತ ವರ್ಷಃ ಕೋ ನಾಮ ಪಯೋಧರೋತ್ಕರ್ಷಃ ॥**

ನೀನು ಗಣ್ಯನೆನಿಸಿ ಉನ್ನತನಾಗಿದ್ದರೂ ಅನ್ಯರಿಗೆ ಉಪಕಾರ ಮಾಡದಿದ್ದರೆ ನಿನ್ನ ಜನ್ಮ ವ್ಯರ್ಥ. ಮಳೆ ಸುರಿಸದಿದ್ದರೆ, ಮೇಲಕ್ಕೇರಿರುವ ಮೋಡದ ಹೆಚ್ಚುಗಾರಿಕೆಯಾದರೂ ಏನು ?

—ಹರಿಹರ ಸುಭಾಷಿತ

# ಚಿಂತನ

## ರಸಜ್ಞತೆ :

—ಟಿ. ಆರ್. ಮಹಾದೇವಯ್ಯ

ಚಾಮರಸ ಕನ್ನಡದ ಹೆಮ್ಮೆಯಕವಿ. ಅವನು ತನ್ನ ಕಾವ್ಯ ಪ್ರಭುಲಿಂಗ ಲೀಲೆಯ ಆರಂಭದಲ್ಲಿ ಕಾವ್ಯವನ್ನು ಓದುವವರು ಯಾವ ಬಗೆಯ ದೃಷ್ಟಿಕೋನ ವನ್ನು ರಸಗ್ರಾಹಿಗುಣವನ್ನು ಪಡೆದಿರಬೇಕು ಎಂಬ ಬಗ್ಗೆ ಹೀಗೆ ವಿಜ್ಞಾಪಿಸಿಕೊಂಡಿ ದ್ದಾನೆ.

ಕುಱಿಗಳೋಪಾದಿಯಲಿ ಕಬ್ಬಿನ
ಹೊಱಗಣೆಲೆಯನು ಮೇದಕಟ ಮೆಲು
ಕಿಱುವುತಲ್ಪ ಸುಖಕ್ಕೆ ಸೋಲದೆ ಕಬ್ಬಿನೊಳು ರಸವ
ನೆಱಿಸವಿವ ಗಜದಂತೆ ಭಕ್ತಿಯ
ತೆಱನ ತಿಳಿದಾಚರಿಸಬೇಕೆಂ
ದಱಿದವರು ಲಾಲಿಸುವುದೀ ಪ್ರಭುಲಿಂಗ ಲೀಲೆಯನು ।

ಕಾವ್ಯವೆಂಬ ಕಬ್ಬಿನ ತೋಟಕ್ಕೆ ಕುರಿಯಂತೆ ಹೊಕ್ಕು ಬರೀ ನೀರಸವಾದ ಗರಿಯನ್ನು ಮೇದು ಅಲ್ಪಸುಖವನ್ನು ಪಡೆದರೆ ಸಾಲದು. ಆನೆಯಂತೆ ಕಬ್ಬಿನ ಜಲ್ಲೆಯಲ್ಲಿ ಹುದುಗಿರುವ ತನಿರಸವನ್ನು ಹೀರುವ ರಸಿಕನಾಗಬೇಕು ಎಂಬುದು ಆತನ ಅಭಿಪ್ರಾಯ. ಬಸವಣ್ಣನವರು ತಮ್ಮ ವಚನವೊಂದರಲ್ಲಿ ಇದೇ ವಿಷಯವನ್ನು ಹೀಗೆ ಪ್ರಸ್ತಾಪಿಸಿದ್ದಾರೆ.

ಕುಱಿ ಹಿಂಡು ಉಲಿವ ಕಬ್ಬಿನ ತೋಂಟವ ಹೊಕ್ಕು
ತೆಱನನಱಿಯದೆ ತನಿರಸದ
ಹೊಱಗಣೆಲೆಯನೆ ಮೇದುವು
ನಿಮ್ಮನಱಿವ ಮದಕರಿಗಲ್ಲದೆ
ಕುಱಿಬಲ್ಲುದೆ, ಕೂಡಲಸಂಗಮದೇವಾ

ಭಗವಂತನ ಇರವನ್ನು ಅರಿಯಬಲ್ಲ ಆನೆಯಂಥ ರಸಜ್ಞನೇ ಹೊರತು ನರಗುರಿ ಯಲ್ಲ ಎಂದಿದ್ದಾರೆ ಅವರು. ಈ ಮಾತನ್ನು ನಾವು ಬದುಕಿಗೂ ಅನ್ವಯಿಸಬಹುದು. ನಾವು ಈ ಬಾಳು ಎಂಬ ಕಬ್ಬಿನ ತೋಟದಲ್ಲಿದ್ದೇವೆ. ನಾವು ಕುರಿಗಳಂತೆ ಅಲ್ಪ

( 44 ನೇ ಪುಟ ನೋಡಿ )

# ಕ್ಷೇತ್ರ ವಾರ್ತೆ

—ಎಚ್. ಶಿವರುದ್ರಯ್ಯ

ಶ್ರೀಕ್ಷೇತ್ರದಲ್ಲಿಯೇ ಇರುವ ಸನಿವಾಸ ವಿದ್ಯಾಸಂಸ್ಥೆಗಳು (     ) ಒಟ್ಟಿಗೆ ಸೇರಿ ಸಂಯುಕ್ತ ವಿದ್ಯಾರ್ಥಿ ಸಂಘವನ್ನು ರೂಪಿಸಿಕೊಂಡು, ಈ ಸಂಘದ ಉದ್ಘಾಟನೆಯು 1981 ನೇ ಆಗಸ್ಟ್ ನಾಲ್ಕ ನೇ ತಾರೀಖಿನಂದು ಶ್ರೀ ಗೌರಿಶಂಕರಸ್ವಾಮಿಗಳವರ ದಿವ್ಯ ಸಮ್ಮುಖದಲ್ಲಿ ತುಮಕೂರು ಜಿಲ್ಲಾ ಡೆಪ್ಯುಟಿ ಕಮಿಷನರ್ ಶ್ರೀ ಎಂ. ಆರ್ಯಮಿತ್ರ I.A.S. ರವರ ಅಧ್ಯಕ್ಷತೆಯಲ್ಲಿ ನೆರವೇರಿಸಲ್ಪಟ್ಟಿತು. ಅವರು 45 ವರ್ಷಗಳ ಹಿಂದೆ ನಾನು ಸಹ ಇಂತಹದೇ ಗುರುಕುಲದಲ್ಲಿ ಅಭ್ಯಾಸ ಮಾಡುತ್ತಿದ್ದೆ ಎಂದು ತಮ್ಮ ವಿದ್ಯಾರ್ಥಿ ಜೀವನವನ್ನ ನೆನಸಿ ಕೊಂಡು ದೇಶದ ಏಳಿಗೆಗೆ ಇಂತಹ ಪುಣ್ಯ ಕ್ಷೇತ್ರಗಳು ಜಾಸ್ತಿಯಾಗಬೇಕು, ಇಲ್ಲಿರುವ ಪೂಜ್ಯರು ಮಾತಿನಲ್ಲಿ ಕೃತಿಯಲ್ಲಿ, ನಡತೆಯಲ್ಲಿ ಒಳ್ಳೆಯದನ್ನು ಮಾರ್ಗದರ್ಶನ ಮಾಡುವವರಾಗಿದ್ದಾರೆ. ವಿವೇಚನಾ ಪೂರ್ವಕವಾದ ರೀತಿಯಲ್ಲಿ ಜೀವನವನ್ನು ರೂಪಿಸಿಕೊಂಡು ನಿಜವಾದ ಮನುಷ್ಯರಾಗಲು ಪ್ರಯತ್ನಿಸಬೇಕು. ಎಂದು ತಿಳಿಸುವುದರ ಮೂಲಕ ಸನಿವಾಸ ವಿದ್ಯಾ ಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘವನ್ನು ಉದ್ಘಾಟಿಸಿದರು.

ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ದಿವ್ಯ ಸಮ್ಮುಖದಲ್ಲಿ 34 ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಲಾಯಿತು. ವಾರ್ತಾ ಮತ್ತು ಯುವಜನ ಸೇವಾ ಸಚಿವರಾದ ಸನ್ಮಾನ್ಯ ಶ್ರೀ ಕೆ. ಗಂಗಾಧರ್‌ರವರು ಧ್ವಜಾರೋಹಣ ಮಾಡಿ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು: ಮಕ್ಕಳಾದ ನೀವು ಜಾತಿ ದ್ವೇಷ ಬಿಟ್ಟು ಸೌಹಾರ್ದತೆಯ ಬಾಳನ್ನು ರೂಪಿಸಿಕೊಂಡು ದೇಶದ ಏಳಿಗೆಗೆ ಕಾರಣರಾಗಬೇಕು. ಸ್ವಾತಂತ್ರ್ಯಕ್ಕೆ ಕಾರಣರಾದ ಹುತಾತ್ಮರ ಆತ್ಮಕ್ಕೆ ಶಾಂತಿ ದೊರಕುವ ರೀತಿಯಲ್ಲಿ ನಡೆದರೆ ನಮ್ಮ ಸ್ವಾತಂತ್ರ್ಯ ದಿನಾಚರಣೆ ಸಾರ್ಥಕವಾಗುತ್ತದೆ. ಎಂಬ ತಮ್ಮ ಅಭಿಲಾಷೆಯನ್ನು ವ್ಯಕ್ತಪಡಿಸಿದರು. ಸ್ವಾಮಿಜಿಯವರು ಮಾತನಾಡುತ್ತಾ, ಸ್ವಾತಂತ್ರ್ಯ ನಿಜವಾಗಿ ಅರ್ಥ ವತ್ತಾಗಬೇಕಾದರೆ ಅಜ್ಞಾನ ಬಡತನ ರೋಗ ರುಜನಗಳಿಂದ ವಿಮುಕ್ತರಾಗಬೇಕು. ಸ್ವಾತಂತ್ರ್ಯ ಬಂದ ಮೇಲೆ ಇದನ್ನು ಪರಿಹರಿಸಲು ಅನುಕೂಲ ವಾತಾವರಣವನ್ನು ಸೃಷ್ಟಿಸಬೇಕು, ಎಂಬ ನೆಹರೂರವರ ಮಾತನ್ನು ಉದಾಹರಿಸುತ್ತಾ 35 ವರ್ಷಗಳಾದರೂ ಪರಿಸ್ಥಿತಿ ಹಾಗೆಯೇ ಇದ್ದು ಅದು ಸಾಧ್ಯವಾಗದಿರುವಾಗ ನಿಜವಾದ ಸ್ವಾತಂತ್ರ್ಯ ಅರ್ಥವತ್ತಾಗಿಲ್ಲ. ಕರ್ತವ್ಯನಿಷ್ಠೆ ಉಳ್ಳವರಾಗಿ ಮುಂದುವರಿದರೆ ಭಾವೀ ಜನಾಂಗವಾದ ನಿಮ್ಮಿಂದ ಹತ್ತಾರು ವರ್ಷಗಳಲ್ಲಿ ಪರಿಸ್ಥಿತಿಯನ್ನು ಸುಧಾರಿಸಬಹುದೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

# ಉದ್ದಾನಶಿವಯೋಗಿಗಳವರ ಅದ್ಭುತ ಘಟನೆಗಳು—೧

—ಹಂ. ಚನ್ನಪ್ಪ ಎರೇಸೀಮೆ

ಉದ್ದಾನಶಿವಯೋಗಿಗಳು ಹುಟ್ಟು ಯೋಗಪುರುಷರು. ಬಾಲಲೀಲಾ ಮಹಾಂತ ಶಿವಯೋಗಿಗಳಂತೆ, ಅಥಣಿ ಶಿವಯೋಗಿಗಳಂತೆ ಇವರ ಜೀವನದಲ್ಲೂ ಅನೇಕ ಅದ್ಭುತ ಪವಾಡಗಳು ನಡೆದು ಹೋಗಿವೆ. ಮಹಾಘನಲಿಂಗವು ತನ್ನ ತಾನ ರ್ಚಿಸಿಕೊಂಬ ಲೀಲಾವಿಲಾಸದಿಂದ ದೇಹವೆಂಬ ಮನೆಯ ಮಾಡಿಕೊಂಡು ಶರಣ ರೂಪಾಗಿ ಅಖಂಡ ಜ್ಞಾನದೃಷ್ಟಿಯಿಂದ ವ್ಯವಹಾರಕ್ಕೆ ಲೋಕಲೌಕಿಕರಂತೆ ಕಂಡರೂ ಅವರ ಇರವಿನ ಪರಿಯೇ ಬೇರೆ. ಅವರು ದೇಹವಿಡಿದಿದ್ದರೂ ದೇಹಗುಣಮುಟ್ಟದಂತೆ ನಿರ್ಲೇಪರಾಗಿಯೆ ಜಗಜ್ಜಾಲದಲ್ಲಿ ವ್ಯವಹರಿಸುತ್ತಾರೆ. ಅಂಥವರ ಜೀವನವೇ ಒಂದು ಲೀಲೆ. ಆ ಲೀಲೆಯಲ್ಲಿನ ಅವರ ಅನೇಕ ಸಹಜಕ್ರಿಯೆಗಳೂ ಲೋಕಕ್ಕೆ ಪವಾಡ ವಾಗಿ ಕಾಣುವುದುಂಟು. ಪವಾಡಗಳನ್ನು ನಂಬದ ಕೆಲವು ವಿಜ್ಞಾನವಾದಿಗಳು ಈ ಬಗೆಗೆ ಸ್ವಲ್ಪ ಅನುಮಾನ ವ್ಯಕ್ತಪಡಿಸುವುದುಂಟು. ಆದರೆ ಉದ್ದಾನಶಿವಯೋಗಿ ಗಳು ಅನೇಕ ಅದ್ಭುತ ಘಟನೆಗಳನ್ನು ಕಂಡವರು, ಇನ್ನೂ ಇದ್ದು ಅವರು ಆ ಘಟನೆಗಳ ಬಗೆಗೆ ಪ್ರಭಾವಿತರಾಗಿ ಹೇಳುತ್ತಿರುವುದನ್ನು ಕೇಳುತ್ತಿದ್ದೇವೆ. ಒಂದು ಕಾಲದಲ್ಲಿ ಪೂರ್ವಜನ್ಮ ಪುನರ್ ಜನ್ಮಗಳ ಬಗೆಗೆ ಸಂಶಯ ವ್ಯಕ್ತಪಡಿಸುತ್ತಿದ್ದ ವಿಜ್ಞಾನವಾದಿಗಳೇ, ಈಗ ಆ ವಿಷಯಲ್ಲಿ ಶ್ರದ್ಧೆ ತಳೆದಿದ್ದಾರೆ. ಈ ಯುಗದ ಜಗ ತ್ಪ್ರಸಿದ್ಧ ಯೋಗಪುರುಷರೆನಿಸಿದ ಅರವಿಂದ ಘೋಷರು ಪವಾಡಗಳನ್ನು ಅಲ್ಲಗಳೆದಿಲ್ಲ. ಅವರ ಜೀವಿತ ಒಂದು ಪವಾಡ ಮಯವೇ ಆಗಿತ್ತು. ಇದೇನೇ ಇರಲಿ ಉದ್ದಾನ ಶಿವಯೋಗಿಗಳು ಅದ್ಭುತ ಶಕ್ತಿಯುಳ್ಳ ಮಹಿಮರು. ಮಹಮ್ಮದೀಯರೂ ಕೂಡ ಇವರ ಅಸಾಧಾರಣ ಶಕ್ತಿಗೆ ಮಾರುಹೋಗಿ ಅವರನ್ನು ಬಾಯ್ತುಂಬ ಹೊಗಳು ತ್ತಾರೆ. ಅವರ ಪವಾಡಗಳನ್ನು ಬಣ್ಣಿಸುತ್ತಾರೆ. ಅನಂತರ ಪವಾಡಗಳನ್ನು ಇವರು ಮಾಡಿದರೂ ಅವುಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ವಿವರಿಸಲಾಗಿದೆ. ಇವುಗಳಲ್ಲಿ ಕೆಲವು ಇವರ ಅದ್ಭುತವಾದ ಪರುಷಶಕ್ತಿಯಿಂದ ನಡೆದ ಘಟನೆಗಳು; ಈ ಹಿಂದೆ ವಿವರಿಸಿರುವ ಉದ್ದಾನಶಿವಯೋಗಿಗಳ ಚರಿತ್ರೆಯಲ್ಲಿಯೇ ಕೆಲವು ಪವಾಡಗಳ ವರ್ಣನೆ ಇದೆ. ಅವುಗಳನ್ನುಳಿದು ಉಳಿದವುಗಳು ಈ ಮುಂದೆ ಇವೆ.

1) ಉದ್ದಾನಶಿವಯೋಗಿಗಳು ಪೂರ್ವಾಶ್ರಮದಲ್ಲಿ ರುದ್ರಪ್ಪ ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದರಷ್ಟೆ. (ಮುಂದಿನ ಕಥೆಗಳಲ್ಲಿ 'ರುದ್ರಪ್ಪ' ಎಂದು ಬಂದೆಡೆಗಳಲ್ಲೆಲ್ಲ ಈ ಹೆಸರು ಉದ್ದಾನಶಿವಯೋಗಿಗಳ ಪೂರ್ವಾಶ್ರಮದ ಹೆಸರೆಂದು ಭಾವಿಸಬೇಕು.) ಇವರು ಸೇವಾಕಾಂಕ್ಷೆಯಿಂದ ಸಿದ್ಧಗಂಗಾಮಠಕ್ಕೆ ಬಂದು ಸೇರಿದ ಮೇಲೆ ಮಠದ ದಾಸೋಹ ವ್ಯವಸ್ಥೆಗೊಂಡು ಅಪೂರ್ವ ಕೊಡುಗೆಯಂತಾಗಿದ್ದರು. ಸೌದೆಸೊಪ್ಪನ್ನು ಹೊಂದಿಸುವ ಭಾರವನ್ನೆಲ್ಲ ಅಡವೀಸ್ವಾಮಿಗಳು ಇವರಿಗೇ ಒಪ್ಪಿಸಿದ್ದರು. ಒಂದು ದಿನ ರುದ್ರಪ್ಪ ಐದಾರು ಗಾಡಿಗಳನ್ನು ಕಟ್ಟಿಸಿಕೊಂಡು ದೇವರಾಯನ ದುರ್ಗಕ್ಕೆ ಸೌದೆಗಾಗಿ ಹೋಗಿದ್ದ. ಕ್ಯಾತಸಂದ್ರದ ಮಹಮ್ಮದೀಯ ಮಬಾರ್‌ಸಾಬಿ ಎಂಬುವವನೂ ಈ ಗುಂಪಿನಲ್ಲಿದ್ದನು. ಗಾಡಿಗಳಲ್ಲಿ ಸೌದೆ ತುಂಬಿ ಹೊರಡುವ ವೇಳೆಗಾಗಲೆ ಕತ್ತಲಾಯಿತು. ಅದು ಮಳೆಗಾಲವಾದ್ದರಿಂದ ಆಕಾಶವೆಲ್ಲ ಮೇಘಾಚ್ಛಾದಿತವಾಗಿ ಕಗ್ಗತ್ತಲು ಎತ್ತೆತ್ತಲೂ ಹರಡಿಹೋಯಿತು. ದಾರಿಯೇ ಕಾಣದಂತಾಯಿತು. ರುದ್ರಪ್ಪನವರಿಗೆ ಗಾಡಿಯವರೆಲ್ಲ 'ಸ್ವಾಮಿ, ಈಗ ಗಾಡಿಗಳನ್ನೆಲ್ಲ ಇಲ್ಲಿಯೇ ಎತ್ತುಗಳ ಕೊರಳುಬಿಚ್ಚಿ ನಿಲ್ಲಿಸಿಬಿಡೋಣ, ಬೆಳಗಾದಮೇಲೆ ಮಠಕ್ಕೆ ಹೋದರಾಯಿತು. ಇನ್ನೂ ಮಠ ನಾಲ್ಕೈದು ಮೈಲು ದೂರವಿದೆ. ರಾತ್ರಿ ಎಲ್ಲಿಯಾದರೂ ಗಾಡಿಗಳು ಉರುಳಿ ಆಗಬಾರದ ಅನಾಹುತವಾದರೆ ಗತಿಯೇನು' ಇತ್ಯಾದಿಯಾಗಿ ನುಡಿಯುತ್ತಿರಲು, ರುದ್ರಪ್ಪನವರು– ಇಲ್ಲ ಆಗಲೇ ಕೂಡದು. ಈಗ ಎಷ್ಟು ಹೊತ್ತಿದ್ದರೂ ಮಠಕ್ಕೆ ಹೋಗಿಯೇ ತೀರಬೇಕು ಅಡವಿಯಪ್ಪನವರು (ಸಿದ್ಧಗಂಗಾಮಠದ ಆಡಳಿತ ನಡೆಸುತ್ತಿದ್ದ ಅಡವಿಸ್ವಾಮಿಗಳು) ಎಷ್ಟು ಹೊತ್ತಿದ್ದರೂ ಮಠಕ್ಕೆ ಈ ದಿನವೇ ಸೌದೆ ಬಂದು ಬೀಳಬೇಕೆಂದು ಆಜ್ಞೆಮಾಡಿದ್ದಾರೆ. ನೀವಾರು ಹೆದರಬೇಡಿರಿ. ಈಗ ಪಂಜಿನ ಬೆಳಕು ಬರುತ್ತೆ ಎನ್ನುತ್ತಿದ್ದಂತೆಯೇ ಗಾಡಿಗಳ ಮುಂಭಾಗದಲ್ಲಿ ಎರಡೂ ಕಡೆಗೂ ಎರಡು ಬೆಳಕುಗಳು ಮುಂದೆ ಮುಂದೆ ನಡೆಯತೊಡಗಿದವು. ಎಲ್ಲರಿಗೂ ಈ ವಿಚಿತ್ರವನ್ನು ಕಂಡು ಭಯಾಶ್ಚರ್ಯಗಳೆರಡೂ ಉಂಟಾದವು. ರುದ್ರಪ್ಪ ಮುಂದೆ ಮುಂದೆ ನಡೆಯತೊಡಗಿದರು. ಗಾಡಿಗಳು ಹಿಂದೆ ಹಿಂದೆ ಬರತೊಡಗಿದವು. ಆ ಬೆಳಕು ಮಠದ ಆವರಣದವರೆಗೂ ಬಂದು ಮಾಯವಾದವು.

ಈ ದೃಶ್ಯವನ್ನು ಕಂಡವರು ಮೊನ್ನೆ ಮೊನ್ನೆಯವರೆಗೂ ಇದ್ದರು, ಕ್ಯಾತ್ಸಂದ್ರದ ಮದಾರ ಸಾಬಿ ಎಂಬ ಮನುಷ್ಯ ಸ್ವತಃ ಈ ದೃಶ್ಯವನ್ನು ಕಂಡು ಕೊನೆಯವರೆಗೆ ಈ ಬಗೆಗೆ ಕಥೆಮಾಡಿ ಹೇಳುತ್ತಿದ್ದ. (—ಜನಜನಿತ ಕಥೆ)

(ಮುಂದುವರಿಯುವುದು)

# ಕುಟುಂಬ ಯೋಜನೆ ಮತ್ತು ನಮ್ಮ ಸಮಾಜ

—ಪ್ರೊ॥ ಎಸ್. ಎಸ್. ಕಸಮುಡಿ

ಇಡೀ ವಿಶ್ವದಲ್ಲಿಯೇ ಕುಟುಂಬ ಯೋಜನೆಯನ್ನು ಒಂದು ರಾಷ್ಟ್ರೀಯ ರ್ಯಕ್ರಮವನ್ನಾಗಿ ಒಪ್ಪಿಕೊಂಡ ಪ್ರಪ್ರಥಮ ರಾಷ್ಟ್ರವೆಂದರೆ ಭಾರತ. ಅತಿ ತೀವ್ರ ತಿಯಿಂದ ಬೆಳೆಯುತ್ತಿರುವ ಜನಸಂಖ್ಯೆಯನ್ನು ತಡೆಗಟ್ಟುವ ಮಹೋದ್ದೇಶದಿಂದ ಯೋಜನೆಯನ್ನು ತಮ್ಮ ಭಾರತ ಸರಕಾರವು ೧೯೫೨ ರಲ್ಲಿ ಆರಂಭಿಸಿತು. ಮಾತೆ ುತ್ತು ಮಗುವಿನ ಆರೋಗ್ಯವನ್ನು ಕಾಪಾಡಿಕೊಂಡು ಬರಲು ಕುಟುಂಬ ಯೋಜ ಯು ಅತಿ ಆವಶ್ಯಕ ಎಂಬುದನ್ನು ಅನೇಕ ಜನ ವಿದ್ವಾಂಸರು, ವಿಚಾರವಂತರು ಮಾಜ ಸುಧಾರಕರು, ಯೋಜಕರು ತಿಳಿಪಡಿಸಿದರು. ಈ ದಿಶೆಯಲ್ಲಿ ಪ್ರೊ॥ ರ್. ಡಿ. ಕರ್ವೆಯವರು ಕುಟುಂಬ ಯೋಜನೆಗೆ ಸಂಬಂಧಿಸಿದ ಚಿಕಿತ್ಸಾಲಯ ಂದನ್ನು ಮೊಟ್ಟ ಮೊದಲಿಗೆ ೧೯೨೧ ರಲ್ಲಿ ಪುಣೆಯಲ್ಲಿ ಪ್ರಾರಂಭಿಸಿದರು. ತದ ಂತರ ಅಂದಿನ ಮೈಸೂರು ಮತ್ತು ಮದ್ರಾಸ ಸರಕಾರಗಳು ಅನುಕ್ರಮವಾಗಿ ೯೩೦ ಹಾಗೂ ೧೯೩೨ ರಲ್ಲಿ ತಮ್ಮ ತಮ್ಮ ರಾಜ್ಯಗಳಲ್ಲ ಕುಟುಂಬ ಯೋಜನೆಯ ಕಿಕಿತ್ಸಾಲಯಗಳನ್ನು ತೆರೆದವು. ೧೯೩೨ ರಲ್ಲಿ ಲಖನೌದಲ್ಲಿ ಸೇರಿದ ಅಖಿಲ ಭಾರ ೀಯ ಮಹಿಳಾ ಪರಿಷತ್ತು ಕುಟುಂಬ ಯೋಜನೆಯ ಬಗ್ಗೆ ಸರಕಾರಕ್ಕೆ ಸಿಫಾರಸು ಮಾಡಿತು. ೧೯೩೫ ರಲ್ಲಿ ರಾಷ್ಟ್ರೀಯ ಯೋಜನಾ ಆಯೋಗದ ಚೇರಮನ್‌ರಾದ ಪಂ. ಜವಾಹರಲಾಲ ನೆಹರು ಅವರು ಈ ಯೆ ೂ ೀ ಜ ನೆ ಗೆ ವಿಶೇಷ ಪ್ರೋತ್ಸಾಹ ವನ್ನಿತ್ತರು.

ಆ ಬಳಿಕ ೧೯೪೦ ರಲ್ಲಿ ಈ ವಿಷಯದ ಬಗ್ಗೆ ಪಾರ್ಲಿಮೆಂಟಿನಲ್ಲಿ ಚರ್ಚಿಸಲಾ ಯಿತು. ೧೯೪೬ ರಲ್ಲಿ "ಆರೋಗ್ಯ ಸಮೀಕ್ಷೆ ಹಾಗು ಅಭಿವೃದ್ಧಿ ಮಂಡಳಿಯ" ಚೆ. ಅರಮನ್ ರಾದ ಸರ್‌ಜೋಸೆಫ ಬೋರೆಯವರು ಜನನ ನಿಯಂತ್ರಣ ಚಿಕಿತ್ಸಾ ಲಯಗಳ ಆವಶ್ಯಕತೆಯ ಬಗ್ಗೆ ಸರಕಾರಕ್ಕೆ ಸಿಫಾರಸು ಮಾಡಿದರು. ಅನಂತರ ೧೯೪೯ ರಲ್ಲಿ ಭಾರತೀಯ ಕುಟುಂಬ ಯೋಜನೆಯ ಸಂಘವು ಮುಂಬೈಯಲ್ಲಿ ಶ್ರೀಮತಿ ಧನವಂತಿ ರಾಮರಾವ ಅವರ ಅಧ್ಯಕ್ಷತೆಯಲ್ಲಿ ರೂಪ ತಾಳಿತು. ಕೊನೆಗೆ ನಮ್ಮ ಜನಪ್ರಿಯ ಸರಕಾರವೇ ೧೯೫೨ ರಲ್ಲಿ ಕುಟುಂಬ ಯೋಜನೆಯನ್ನು ಒಂದು ರಾಷ್ಟ್ರೀಯ ಕಾರ್ಯಕ್ರಮವನ್ನಾಗಿ ಒಪ್ಪಿಕೊಂಡು ಮುನ್ನಡೆಯುವಂತಾಯಿತು. ಇದು ನಮ್ಮ ದೇಶ ದಲ್ಲಿ ಕುಟುಂಬ ಯೋಜನೆಯು ಹುಟ್ಟಿ ಬೆಳೆದು ಬಂದ ರೀತಿ.

ಆದರೆ ಕುಟುಂಬ ಯೋಜನೆಯ ಬಗ್ಗೆ, ಸಂತಾನ ನಿಯಂತ್ರಣದ ಬಗ್ಗೆ ಬಹಿರಂಗವಾಗಿ ಮಾತನಾಡಲೂ ಕೂಡ ಹಿಂಜರಿಯುತ್ತಿದ್ದ ಕಾಲವೊಂದಿತ್ತು. ದಾಸ್ಯತ್ವದ ಶೃಂಖಲೆಗಳಿಂದ ದೇಶವು ಬಂಧಿತವಾದಂತಹ ಪರಿಸ್ಥಿತಿಯಲ್ಲಿ ಲೋಕ ಕಲ್ಯಾಣದ ಗುಣ ಹೊಂದಿದ, ದೂರ ದೃಷ್ಟಿಗೆ ಹೆಸರುವಾಸಿಯಾಗಿದ್ದ ಮೈಸೂರಿನ ಶ್ರೀಮನ್ ಮಹಾರಾಜ ನಾಲ್ಮಡಿ ಕೃಷ್ಣರಾಜ ಒಡೆಯರ್ ಅವರು ಸುಮಾರು ೫೦ ವರ್ಷಗಳ ಹಿಂದೆಯೇ ಅಂದರೆ ೧೯೩೦ ರ ಜೂನ್ ತಿಂಗಳಿನಲ್ಲಿ ವಿಶ್ವದಲ್ಲಿಯೇ ಪ್ರಪ್ರಥಮ ಜನನ ನಿಯಂತ್ರಣ ಚಿಕಿತ್ಸಾಲಯಗಳನ್ನು ಬೆಂಗಳೂರಿನ ವಿಕ್ಟೋರಿಯಾ ಮತ್ತು ಹೆರಿಗೆ ಆಸ್ಪತ್ರೆ ಹಾಗೂ ಮೈಸೂರಿನ ಕೃಷ್ಣರಾಜೇಂದ್ರ ಮತ್ತು ವಾಣಿ ವಿಲಾಸ ಆಸ್ಪತ್ರೆಗಳಲ್ಲಿ ಸ್ಥಾಪಿಸಿದರು. ಜನ ಜೀವನದ ಗುಣಮಟ್ಟವನ್ನು ಉತ್ತಮಗೊಳಿಸುವ ವಿನೂತನ ಕಾರ್ಯಕ್ರಮವೊಂದನ್ನು ಈಗ್ಗೆ ೫೦ ವರ್ಷಗಳ ಹಿಂದೆ ಜಾರಿಗೊಳಿಸಿದುದರ ಪ್ರಯುಕ್ತವಾಗಿ ಕನ್ನಡಿಗರಾದ ನಾವು ನಮ್ಮ ನಾಡಿನಾದ್ಯಂತ ಅದರ ಸುವರ್ಣ ಮಹೋತ್ಸವವನ್ನು ಆಚರಿಸಿದೆವು.

ನಾವು ಭಾರತೀಯರು, ನಮ್ಮದು ಭಾರತೀಯ ಸಮಾಜ. ವಿಶ್ವದಲ್ಲಿಯೇ ವೈಶಿಷ್ಟ್ಯಪೂರ್ಣ ಸಮಾಜ ನಮ್ಮದು. ಪ್ರಪಂಚದ ಮಿಕ್ಕುಳಿದ ಸಮಾಜಗಳಿಗಿಂತ ತನ್ನ ರಚನೆಯಲ್ಲಿ ತೀರ ಭಿನ್ನತೆಯನ್ನು ಹೊಂದಿದಂತಹದು. ಅಂದರೆ ಎಂದಿನಿಂದಲೋ ರೂಢಿಸಿಕೊಂಡುಬಂದ ತನ್ನವೇ ಆದ ವಿಶಿಷ್ಟಪದ್ಧತಿ, ಸಂಪ್ರದಾಯ, ಲೋಕರೂಢಿ, ಶಿಷ್ಟಾಚಾರ, ಕಂದಾಚಾರ, ವಿಧಿನಿಷೇಧಗಳನ್ನು ನೈತಿಕ ನಿಯಮಗಳನ್ನು ಮತ್ತು ಮೂಢ ನಂಬಿಕೆಗಳನ್ನು ಹೊಂದಿದ ಸನಾತನ ಸಮಾಜ ನಮ್ಮದು. ಹೀಗಾಗಿ ಇಲ್ಲಿರುವ ಬಹುತೇಕ ಜನರು ಸನಾತನ ವಾದಿಗಳು. ಸಂಪ್ರದಾಯಸ್ಥರು. ಮತ್ತು ಸಂಶಯಗ್ರಸ್ತರು ಆಗಿದ್ದಾರೆ. ನಾವೀನ್ಯತೆಯನ್ನು ತಮ್ಮ ಜೀವನದಲ್ಲಿ ಬಹು ಬೇಗನೇ ರೂಢಿಸಿಕೊಳ್ಳದವರು. ಅಂದರೆ ಹೊಸದನ್ನು ವಿಷದಂತೆ ಕಾಣುವ ಸಂಶಯಗ್ರಸ್ತರು.

ಅರ್ಥಹೀನವಾದ ಅನೇಕಾನೇಕ ಮೂಢನಂಬಿಕೆಗಳನ್ನು ವ್ಯರ್ಥವಾಗಿ ನಂಬಿ ನಡೆದವರು ನಮ್ಮ ಜನ. ಅಂದರೆ ತಮ್ಮ ಮಕ್ಕಳಿಗೆ ಕೆಮ್ಮು, ನೆಗಡಿ, ಹುರುಕು, ಗಣಜಲಿ, ಕಣ್ಣುಬೇನೆ, ಮೈಲಿಬೇನೆ ಮುಂತಾದವುಗಳು ತಾಗಿದಾಗ ನೇರವಾಗಿ ಸಂಬಂಧಪಟ್ಟ ವೈದ್ಯರ ಬಳಿಗೆ ಹೋಗಿ ಸರಿಯಾದ ಔಷಧೋಪಚಾರ ಹಾಗು ಸಕಾಲಿಕ ಸಲಹೆ ಸೂಚನೆಗಳನ್ನು ಪಡೆದುಕೊಳ್ಳದೆ ಗ್ರಾಮದೇವರುಗಳಾದ ಹಣಮಪ್ಪ, ಎಲ್ಲಮ್ಮ, ಲಕ್ಕವ್ವ, ದ್ಯಾಮವ್ವ, ದುರ್ಗಮ್ಮನ ಗುಡಿಗೆ ಹರಕೆ ಹೊತ್ತು ಬರುವ ಮೂಢನಂಬಿಕಸ್ತರ ಸಮಾಜ ನಮ್ಮದು. ಕೇರ, ಲಿಂಬೆಹಣ್ಣು, ಚೀಟಿ, ತಾಮ್ರ, ಮಂತ್ರ ಮಾಟಗಳನ್ನು ತುಟಿ ಎರಡು ಮಾಡದೆ ನಂಬಿ ನಡೆಯುವ ಸಂಪ್ರದಾಯಸ್ಥರ ಸಮಾಜವಿದು.

ಕೂಡ ಒಂದು ಭೀಕರ ಸಮಸ್ಯೆ ಎಂಬುದನ್ನು ಮನವರಿಕೆಮಾಡಿಕೊಡಬೇಕಾದುದು ಅಕ್ಷರಸ್ಥರ ಪಾಲಿನ ಪವಿತ್ರ ಕರ್ತವ್ಯವಾಗಿದೆ.

ಮಿಂಚಿನ ವೇಗದಿಂದ ಮುನ್ನಡೆದ ಈ ಜನ ಸಂಖ್ಯಾ ಸಮಸ್ಯೆಯು ಒಂದು ಒಡೆಯದ ಒಗಟಾಗಿದೆ. ನಾಡ ನಾಯಕರ, ಯೋಜಕರ, ಶಾಸಕರ, ಚಿಂತಕರ, ಆಡಳಿತಗಾರರ ತಲೆ ತಿನ್ನುವ ಪ್ರಶ್ನೆಯಾಗಿದೆ. ಇಂದು ಬಲು ಭರದಿಂದ ಬೆಳೆಯು ತ್ತಿರುವ ಈ ಜನ ಸಂಖ್ಯೆಯನ್ನು ನಾವು ಕುಟುಂಬ ಕಲ್ಯಾಣ ಕಾರ್ಯಕ್ರಮದ ಮೂಲಕ ಒಂದು ವೇಳೆ ನಿಯಂತ್ರಿಸದಿದ್ದರೆ ಇಡೀ ಜನಜೀವನವೇ ಹದಗೆಟ್ಟು ಹೋಗಿ ಜೀವನದಲ್ಲಿ ಅತೃಪ್ತಿ, ಅಶಾಂತಿ, ಅವ್ಯವಸ್ಥೆ, ನಿರಾಸೆ, ನಿರುತ್ಸಾಹಗಳು ತಲೆದೋರಿ ಸಮಾಜದಲ್ಲಿ ಪ್ರಕ್ಷುಬ್ಧ ಪರಿಸ್ಥಿತಿ ನಿರ್ಮಾಣವಾಗುವುದರಲ್ಲಿ ಎಳ್ಳನಿತೂ ಸಂದೇಹವಿಲ್ಲ. ಯಾಕೆಂದರೆ ಪ್ರತಿ ಒಂದೂವರೆ ಸೆಕೆಂಡಿಗೆ ಒಂದು ಮಗುವಿನ ಜನನವಾಗುತ್ತದೆ. ಅಂದರೆ ಪ್ರತಿ ನಿತ್ಯ ಭಾರತದಲ್ಲಿ ೫೫ ಸಾವಿರಕ್ಕೂ ಹೆಚ್ಚು ಕೂಸುಗಳು ಹುಟ್ಟುತ್ತವೆ ಎಂದು ಲೆಕ್ಕ ಹಾಕಲಾಗಿದೆ. ಒಂದು ವರ್ಷಕ್ಕೆ ಸುಮಾರು ಎರಡು ಕೋಟಿ ಹತ್ತು ಲಕ್ಷ ಜನರು ಜನ್ಮತಾಳುವರು. ಇದಕ್ಕೇನಾದರೂ ಇತಿ ಮಿತಿ ಇದೆಯೆ? ಇಲ್ಲ. ಈ ರೀತಿ ಹುಟ್ಟಿದವರಲ್ಲಿ ಕೇವಲ ೮೦ ಲಕ್ಷದಷ್ಟು ಜನರು ಮಾತ್ರ ಮರಣ ಹೊಂದುತ್ತಾರೆ. ಹೀಗಾಗಿ ಜನನ ಪ್ರಮಾಣವನ್ನು ಮರಣ ಪ್ರಮಾಣದೊಂದಿಗೆ ಸರಿ ಹೋಲಿಸಿ ನೋಡಿದಾಗ ಜನನ ಪ್ರಮಾಣವು ಅತಿ ಎನಿ ಸುತ್ತದೆ. ಇದಕ್ಕೆ ಪ್ರಬಲವಾದ ಕಾರಣವೂ ಉಂಟು.

ಇಂದು ಆರೋಗ್ಯ ವಿಜ್ಞಾನವು ಬಹಳಷ್ಟು ಬೆಳೆದು ಹೊಸ ಹೊಸ ಔಷ ಧೋಪಚಾರಗಳ ಸಂಶೋಧನೆಯಾಗಿ, ಈ ಹಿಂದೆ ಹೆಡೆ ಎತ್ತಿ ನಿಲ್ಲುತ್ತಿದ್ದ ಪ್ಲೇಗು ಕಾಲರಾ ಮಲೇರಿಯಾ ಮೈಲಿ ಮುಂತಾದ ಪಿಡುಗುಗಳ ವಿಪರೀತ ಹಾವಳಿ ನಿಂತು; ನೆರೆಹಾವಳಿ, ಭೂಕಂಪ, ಬರಗಾಲಗಳ ಉಗ್ರ ಪ್ರಮಾಣವು ಕಡಿಮೆಯಾಗಿ ಇಂದು ಮರಣ ಪ್ರಮಾಣ ತಗ್ಗಿ ಜನನ ಪ್ರಮಾಣ ಹಿಗ್ಗುವಂತಾಗಿದೆ. ಈ ತೆರನಾಗಿ ವಿಪ ರೀತವಾಗಿ ಹೆಚ್ಚುತ್ತಿರುವ ಈ ಜನ ಸಂಖ್ಯೆಗೆ ರಾಮಬಾಣ ವೆಂದರೆ ಈ ಕುಟುಂಬ ಕಲ್ಯಾಣ ಯೋಜನೆ ಎಂಬುದನ್ನು ನಮ್ಮ ಜನತೆ ಅರಿಯಬೇಕಾಗಿದೆ.

ಕುಟುಂಬ ಯೋಜನೆಯು ನಮ್ಮ ಧ್ಯೇಯೋದ್ದೇಶಗಳ ಆಧಾರ ಸ್ತಂಭ. ತೀರ ಹಿಂದುಳಿದ, ಅನಕ್ಷರಸ್ತ ಹಾಗೂ ಮೂಢ ನಂಬಿಗಸ್ತರ ತವರೂರಾದ ನಮ್ಮ ದೇಶ ದಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮವನ್ನು ಯಶಸ್ವಿಗೊಳಿಸುವುದೆಂದರೆ ಮಳಲಿ ನಲ್ಲಿ ಮನೆ ಕಟ್ಟಿದಂತೆಯೇ ಸರಿ. ಎಂದು ಹತಾಶರಾಗದೆ ವೈದ್ಯರುಗಳು ಹಾಗು ಅವರ ಸಿಬ್ಬಂದಿಯವರು ಅಂತಃಕರಣ ಮೂರ್ತಿಗಳಾಗಿ, ಶಾಂತಸ್ವಭಾವದವರಾಗಿ ಕಳಕಳಿವಂತರಾಗಿ, ದೂರದೃಷ್ಟಿಯುಳ್ಳವರಾಗಿ ವಿಶೇಷ ಆಸಕ್ತಿವಹಿಸಿ ಪ್ರಾಮಾಣಿಕ

ಪ್ರಯತ್ನಶೀಲರಾಗಿ ಜನಸಾಮಾನ್ಯರೊಂದಿಗೆ ವರ್ತಿಸಿ ಕುಟುಂಬ ಯೋಜನೆಯ ಸರಿಯಾದ ತಿಳುವಳಿಕೆಯನ್ನು ಯಾರಿಗೆ ಮಾಡಿಕೊಡಬೇಕೋ ಅವರಿಗೆ ಮಾಡಿಕೊಟ್ಟು ಸಂತಾನಹರಣವು ಪಾಪಕರವಲ್ಲ, ಸ್ವಹಿತಕಾರಿ ಎಂಬ ಭಾವನೆಯನ್ನು ಅವರಲ್ಲಿ ಮೂಡಿಸಬೇಕು. ಅಲ್ಲದೆ ನಿರೋಧದ ಬಗ್ಗೆ ಯಾವುದೇ ವಿರೋಧ ಬಾರದಂತೆ, ಲೂಪಿನ ಬಗ್ಗೆ ಜನ ಕೋಪತಾಳದಂತೆ ವಂಕಿಯ ಬಗ್ಗೆ ಯಾರೂ ಬೆಂಕಿಯಾಗದಂತೆ ಸಂಬಂಧಿಸಿದ ವೈದ್ಯರು ಹಾಗೂ ಅವರ ಸಿಬ್ಬಂದಿಯವರು ನೋಡಿಕೊಳ್ಳಬೇಕು.

ಮಿತ ಸಂತಾನ ಹೂವಿನ ಹಾರ, ಅತಿ ಸಂತಾನ ಜೀವನ ಭಾರ; ಚಿಕ್ಕ ಕುಟುಂಬ ಚೊಕ್ಕ ಕುಟುಂಬ; ಮಿತ ಸಂಸಾರ ಹಿತ ಸಂಸಾರ; ಆರತಿಗೊಬ್ಬ ಮಗಳು ಕೀರುತಿಗೊಬ್ಬ ಮಗ. ಒಂದು ಎರಡು ಬೇಕು ಮೂರು ಮಕ್ಕಳು ಸಾಕು; ಹೆಣ್ಣಿರಲಿ ಗಂಡಿರಲಿ ಮಕ್ಕಳೆರಡೇ ಇರಲಿ; ಹಮ್ ದೋ ಹಮಾರೆ ದೋ—ಇತ್ಯಾದಿ ಕುಟುಂಬ ಯೋಜನಾ ಘೋಷಣೆಗಳನ್ನು ಪ್ರಚುರ ಪಡಿಸಲು ಚಲನ ಚಿತ್ರ ಪ್ರದರ್ಶನ, ಚಿತ್ರ ಪ್ರದರ್ಶನ, ನಾಟಕಾಭಿನಯ, ಹಳ್ಳಿಗರಿಗೆ ರು ಚಿ ಸು ವ ದೊಡ್ಡಾಟ, ಬಯಲಾಟ ಲಾವಣಿ, ಕೀರ್ತನ, ಭಾಷಣ, ಕವಿ ಸಮ್ಮೇಲನ, ವಿಚಾರ ಸಂಕಿರಣ, ವಿಚಾರ ಗೋಷ್ಠಿ, ಚರ್ಚಾಕೂಟ ಮುಂತಾದವುಗಳನ್ನು ಏರ್ಪಡಿಸಿ; ಪತ್ರಿಕೆಗಳ ಮೂಲಕ ಬಾನುಲಿಯ ಮೂಲಕ ಶಕ್ತಿ ಮೀರಿ ಪ್ರಚಾರಮಾಡಿ ಜನರು ಸ್ವಯಂ ಮುಂದೆ ಬಂದು ಸಹಕರಿಸುವಂತೆ ಮಾಡಿದರೆ ಸಾಕು ಕುಟುಂಬ ಕಲ್ಯಾಣ ಕಾರ್ಯಕ್ರಮವು ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ.

ಮುಂಬರುವ ದಿನಗಳಲ್ಲಿ ಪ್ರತಿಯೊಬ್ಬ ಭಾರತೀಯನೂ ತಕ್ಕ ಮಟ್ಟಿಗಾದರೂ ವಸತಿ, ವಸ್ತ್ರ, ಆಹಾರ ಮತ್ತು ಉದ್ಯೋಗಗಳನ್ನು ಪಡೆಯಬೇಕಾದರೆ ಆ ಮತ ಈ ಮತ; ಆ ಧರ್ಮ-ಈ ಧರ್ಮ; ಅನರಿವರೆನ್ನದೆ ಕಡ್ಡಾಯವಾಗಿ ಎಲ್ಲರೂ ಅನುಸರಿಸಿದರೆ ಮಾತ್ರ ನಾವು ಬದುಕ ಬಹುದು, ಬಾಳಬಹುದು. ಇಲ್ಲದೆ ಹೋದಲ್ಲಿ ಇರವೆಯಂತೆ ನರರು ಬೆಳೆದು ಒಬ್ಬರನ್ನೊಬ್ಬರು ಹರಿದು ತಿನ್ನುವ ದೌರ್ಭಾಗ್ಯದ ದಿನಗಳು ಬರಬಹುದು. ಪರಿಸ್ಥಿತಿ ಕೈಮೀರಿ ಹೋಗಬಾರದೆಂದೇ ಈಗಾಗಲೇ ನಮ್ಮ ದೇಶದಲ್ಲಿ ಕುಟುಂಬ ಕಲ್ಯಾಣ ಯೋಜನೆಯ ಕಾರ್ಯವನ್ನು ಚುರುಕುಗೊಳಿಸಲಾಗಿದೆ. ಕುಟುಂಬ ಯೋಜನೆಯೆಂದರೆ ಕೇವಲ ಸಂತಾನ ನಿರೋಧ ಶಸ್ತ್ರಚಿಕಿತ್ಸೆಯಲ್ಲ. ತಾಯಿ—ಮಗುವಿನ ಆರೋಗ್ಯ ಇದರಲ್ಲಿ ಅಡಕವಾಗಿದೆ. ಇಟ್ಟಿಗೆ - ಗಾರೆಗಳಿಂದಾಗುವ ಕಟ್ಟಡ ನಿರ್ಮಾಣದ ಕಾರ್ಯವೂ ಇದು ಅಲ್ಲ. ವ್ಯಕ್ತಿಯ ಭಾವನಾತ್ಮಕ ನಿರ್ಧಾರಕ್ಕೆ ಸಂಬಂಧಿಸಿದ ವಿಚಾರವಿದು, ವ್ಯಕ್ತಿಯ ಮತ್ತು ದೇಶದ ಹಿತದೃಷ್ಟಿಯಿಂದ ಸಕಲರೂ ಆಸಕ್ತಿ ವಹಿಸಬೇಕು. ಅಲ್ಲದೆ ಸ್ವಯಂಪ್ರೇರಿತ ಸಂತಾನ ನಿಯಂತ್ರಣವನ್ನು ಯಾವ ಧರ್ಮವೂ ನಿಷೇಧಿಸಿಲ್ಲ. ಈ ಸಂಬಂಧದಲ್ಲಿ ಯಾವುದೇ ಅಪಪ್ರಚಾರಕ್ಕೂ ಕಿವಿಗೊಡಬಾರದೆಂದು

ಕಂಡ ದೇವರಿಗೆಲ್ಲ ಕೈಮುಗಿದು ಹರಕೆ ಹೊತ್ತು ಬೆಳ್ಳಿತೊಟ್ಟಿಲು, ಕಣಬಟ್ಟಲು ದುಕೆ, ಗಂಟೆ, ಜಾಗಟೆ, ಕಳಸ, ಪಾಲಕಿ, ತುರಾಯಿ, ಕಾಯಿ-ಕರ್ಪೂರ, ದೀರ್ಘ ಡ ನಮಸ್ಕಾರ, ಕುರಿವಧೆ, ಕೋಣವಧೆಗಳಲ್ಲಿ, ಅಪಾರ ವಿಶ್ವಾಸವಿಟ್ಟು ಅಂಥ ದ್ಧಿಯ ಮುಗ್ಧ ಹಾಗೂ ಅವಿದ್ಯಾವಂತರ ಸಮಾಜ ನಮ್ಮದು. ಹೀಗಾಗಿ ತಂತ್ರ್ಯೋತ್ತರ ಭಾರತದಲ್ಲಿ ರಾಷ್ಟ್ರೀಯ ಅಭಿವೃದ್ಧಿಗಾಗಿ ಹಾಕಿಕೊಂಡು ಬಂದ ೇಕ ನಮ್ಮ ಯೋಜನೆಗಳು ನಿರೀಕ್ಷಿಸಿದ ಪ್ರಮಾಣದಲ್ಲಿ ಫಲಪ್ರದವಾಗದೆ ಹೋಗು ತಾಗಿದೆ.

ಅನಭಿವೃದ್ಧ ರಾಷ್ಟ್ರವಾದ ನಮ್ಮ ಭಾರತ ದೇಶದ ಅಭಿವೃದ್ಧಿಗಾಗಿ ಸರ್ವತೋ ುಖ ಪ್ರಗತಿಗಾಗಿ, ಜನತೆಯ ಕಲ್ಯಾಣಕ್ಕಾಗಿ ಪರರಾಷ್ಟ್ರಗಳಿಂದ ಧನ ಸಹಾಯ ಡೆದುಕೊಂಡು ಅನೇಕಾನೇಕ ಮಹತ್ವಪೂರ್ಣ ಯೋಜನೆಗಳನ್ನು ನಮ್ಮ ಜನಪ್ರಿಯ ರಕಾರವು ಆರಂಭಿಸಿತು. ಅಂಥ ಅರ್ಥಪೂರ್ಣ ಯೋಜನೆಗಳಲ್ಲಿ ಈ ಕುಟುಂಬ ಲ್ಯಾಣ ಯೋಜನೆಯೂ ಒಂದು.

'ಭ್ರೂಣ ಹತ್ಯಾ ಮಹಾಪಾಪ' 'ಅಪುತ್ರಸ್ಯ ಗತಿರ್ನಾಸ್ತಿ '- ಎಂಬ ಹೇಳಿಕೆ ಳಲ್ಲಿ ಅಪಾರ ಶ್ರದ್ಧೆ, ವಿಶ್ವಾಸಗಳನ್ನಿಟ್ಟ ಸನಾತನ ಸಮಾಜ ನಮ್ಮದು. 'ಹುಟ್ಟಿ ದ ದೇವರು. ಹುಲ್ಲು ಮೇಯಿಸುವನೇ'? ಎಂದು ಭಿಡೆ ಬಿಟ್ಟು ಕೇಳುವ ಬಹಾ ದ್ದೂರರು ನಾವು. "ಬಡತನ ನನಗಿರಲಿ, ಬಾಳ ಮಕ್ಕಳಿರಲಿ;" "ಹಾವಿನ ಹೆಡಿಚೆಂದ, ಹೂವಿನ ಮಿಡಿಚೆಂದ ಮಕ್ಕಳು ಚೆಂದ ಮನಿಗೆಲ್ಲ' 'ಬಾಲಕರಿಲ್ಲದ ಬಾಲೀದ್ಯಾತರ ಜನ್ಮ ಾಡೀಗಿ ಎತ್ತು ದುಡಿದಂಗ;" "ಅತ್ತರೆ ಅಳಲವ್ವ ಈ ಕೂಸು ನನಗಿರಲಿ, ಕೆಟ್ಟರೆ ಕೆಡಲಿ ಮನಿಗೆಲಸ;" "ಕೂಸು ಇದ್ದಮನೆಗೆ ಬೀಸಣಿಗೆ ಯಾತಕೆ "- ಎಂಬ ಈ ನೂರೆಂಟು ಜಾನಪದ ಮುಕ್ತಕಗಳನ್ನು ನಿರೂಪಿಸಿದ ಜನತೆಯಿಂದ ಕೂಡಿದ ಸಮಾಜ ನಮ್ಮದು.

"ಅಷ್ಟಪುತ್ರ ಸೌಭಾಗ್ಯವತೀ ಭವ" ಎಂದು ಹರಸಿ ಹಾರೈಸುವ ನಾಡಿನವ ರಾದ ನಾವು 'ಮಕ್ಕಳೆಂದರೆ ದೇವರಿತ್ತ ಕಾಣಿಕೆ' ಎಂದು ಹೇಳಿ ಸಂಪೂರ್ಣ ಸಮಾ ಧಾನಪಟ್ಟುಕೊಳ್ಳುವರು. ಕಂಡ ದೇವರಿಗೆಲ್ಲ ಕೈಮುಗಿದು ಹಡೆದು ಬಂಜೆಂಬ ಲೋಕಾಪಕೀರ್ತಿಯನ್ನು ದೂರಮಾಡ ಬಯಸುವವರು ನಮ್ಮ ಮಹಿಳೆಯರು. ಇದು ನಮ್ಮ ಸಮಾಜದ ವಾಸ್ತವಿಕ ಚಿತ್ರ.

ಇಂತಹ ವಾಸ್ತವಿಕತೆಯನ್ನು, ಸಾಮಾಜಿಕ ಸ್ಥಿತಿ – ಗತಿಗಳನ್ನ ಮತ್ತು ನಮ್ಮ ಜನತೆಯಲ್ಲಿ ನಿರರ್ಥಕವಾಗಿ ಬೇರೂರಿದ ತಪ್ಪು ಕಲ್ಪನೆಗಳನ್ನು ಬದಲಾ ಯಿಸಲು ನಮ್ಮ ಸಮಾಜ ಕಾರ್ಯಕರ್ತರು, ಶಿಕ್ಷಕರು, ಯೋಜಕರು, ಲೇಖಕರು,

ಧರ್ಮಗುರುಗಳು, ಸರಕಾರೀ ಅಧಿಕಾರಿಗಳು, ವೈದ್ಯರು, ಮತ್ತು ವೈದ್ಯರ ಸಿಬ್ಬಂದಿ ಯವರು ತಮ್ಮ ಪ್ರಾಮಾಣಿಕ ಪ್ರಯತ್ನಮಾಡುವ ಕಾಲವೀಗ ಸನ್ನಿಹಿತವಾಗಿದೆ.

ಹತ್ತು ಹಡೆಯುವುದಕ್ಕಿಂತ ಒಂದು ಮುತ್ತು ಹಡೆಯುವುದು ಲೇಸು;" "ಹೊತ್ತು ಬಂದಂತೆ ಕೊಡೆ ಹಿಡಿಯಬೇಕು" ಎಂಬ ಇತ್ಯಾದಿ ಲೋಕಾನುಭವದ ಮಾತುಗಳನ್ನೂ, 'ಅಷ್ಟಪುತ್ರ ಸೌಭಾಗ್ಯವತಿಭವ' ಎಂಬುದರ ಬದಲು "ಇಷ್ಟಪುತ್ರ ಸೌಭಾಗ್ಯವತೀಭವ' ಎಂಬ ವಿನೂತನ ತತ್ತ್ವನಿರೂಪಣೆಯನ್ನೂ; 'ಬಾಳ ಬಾಲಕರಿದ್ದ ಬಾಲೀದ್ಯಾತರ ಜನ್ಮ?" ಬಡತನ ನನಗ್ಯಾಕ ಬಾಳ ಮಕ್ಕಳ್ಯಾಕ?" ಎಂದು ಸ್ವಯಂ ಮಹಿಳೆಯೆ ಪ್ರಶ್ನಿಸುವಂತೆ ಅವಳ ಮನೋಭೂಮಿಕೆಯನ್ನು ಬದಲಿಸುವಲ್ಲಿ ನಾವಿಂದು ಬಹಳಷ್ಟು ಪರಿಶ್ರಮ ಪಡಬೇಕಾಗಿದೆ. ಹೆಣ್ಣೆಂದರೆ ಹಡೆಯುವ ಯಂತ್ರವಲ್ಲ. ಅವಳಿಗೂ ಸುಖ-ದುಃಖಗಳುಂಟು; ನೋವು-ನಲಿವುಗಳುಂಟು; ಬೇಕು-ಬೇಡಗಳುಂಟು ಎಂಬುದನ್ನು ಮನಗಂಡು ತಾಯಿ-ಮಗುವಿನ ಯೋಗ ಕ್ಷೇಮ ಕುರಿತು ಮತ್ತು ಆರೋಗ್ಯದ ಪ್ರಜ್ಞೆಯನ್ನು ಅವಳಲ್ಲಿ ಬೆಳೆಸಲು

"ಜಂತಿ ಜಂತಿಯು ತುಂಬ ಹಲವು ತೊಟ್ಟಿಲ ಕಟ್ಟಿ,<br>
ರಟ್ಟೆ ಬೀಳುವತನಕ ತೂಗೆಂದು ಒಬ್ಬನೂ ಹೇಳಿಲ್ಲ ಈ ಲೋಕದಲ್ಲಿ",-

ಎನ್ನುವ ತಿಳುವಳಿಕೆಯ ಮಾತನ್ನು ಹೇಳುವ ಸಾಹಸಮಾಡಬೇಕಾದುದು ಎಂದಿಗಿಂತಲೂ ಇಂದು ಆವಶ್ಯಕವಾಗಿದೆ.

"ಹತ್ತು ಮಕ್ಕಳ ಹಡೆದು ಮುತ್ತೈದೆಯಾಗೆಂದು<br>
ಹರಸಿ ಹಾರೈಸುವುದು ಇನ್ನು ಸಾಕು.<br>
ನಾವಿಬ್ಬರು ನಮಗಿಬ್ಬರು ಇರಲೆಂಬ<br>
ಒಮ್ಮನದ ಸಂಕಲ್ಪ ಇನ್ನು ಬೇಕು,"- ಎನ್ನುವ ಎಚ್ಚರಿಕೆಯ ಮಾತು

ನಮ್ಮ ಅವಿದ್ಯಾವಂತ ಜನತೆಯು ಮನಂಬುಗುವಂತೆ ಹೇಳಲು ನಾವಿಂದು ಕಳಕಳಿಯಿಂದ ಪ್ರಯತ್ನಿಸಬೇಕಾಗಿದೆ.

ನಿರಕ್ಷರ ಕುಕ್ಷಿಗಳಾದ, ರಾಷ್ಟ್ರಾಭಿವೃದ್ಧಿಯ ಕಲ್ಪನೆ ಇರದ, ಈ ದೇಶ ನಮ್ಮದೆನ್ನುವ ಭಾವ ಇರದ, ಸರಕಾರವು ಹಾಕಿಕೊಂಡಿರುವ ಯೋಜನೆಗಳು ನಮ್ಮ ಹಿತಕ್ಕಾಗಿ, ನಮ್ಮ ಕಲ್ಯಾಣಕ್ಕಾಗಿ ಇವೆ ಎನ್ನುವ ತಿಳುವಳಿಕೆ ಇರದ ನಮ್ಮ ಮುಗ್ಧ ಜನಗಳಿಗೆ ಇಂದು ನಮ್ಮ ದೇಶವು ಎದುರಿಸುತ್ತಿರುವ ಜ್ವಲಂತ ಸಾಮಾಜಿಕ ಸಮಸ್ಯೆಗಳಾದ ಬಡತನ, ನಿರುದ್ಯೋಗ, ನಿರಕ್ಷರತೆ, ಅಪರಾಧ, ಭಿಕ್ಷಾಟನೆ ಮುಂತಾದವುಗಳಲ್ಲಿ ಈ ಮಿತಿ ಮೀರಿ ಬೆಳೆಯುತ್ತಿರುವ ಜನಸಂಖ್ಯಾ ಸಮಸ್ಯೆಯೂ

ತಿಳಿಸಿ ಹೇಳಲು ಕರ್ನಾಟಕ ರಾಜ್ಯವೊಂದರಲ್ಲಿಯೇ ಈ ಬಾರಿಗೆ ಈ ಸೇವೆಗಾಗಿ ೨೬೯ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ೩೩೪೦ ಉಪಕೇಂದ್ರಗಳು, ೧೦೮ ನಗರ ಕುಟುಂಬ ಕಲ್ಯಾಣ ಕೇಂದ್ರಗಳು ೨೮ ಬಾಣಂತಿತನ ಸೇವಾ ಕೇಂದ್ರಗಳು ಹಾಗು ೨೩೩ ಆಸ್ಪತ್ರೆಗಳು ಮತ್ತು ೧೩೬೭ ಆರೋಗ್ಯ ಘಟಕಗಳು ಸೇವಾ ನಿರತವಾಗಿವೆ ಎಂಬುದನ್ನು ನಾವಿಲ್ಲಿ ಗಮನಿಸಬಹುದು. ತಾಗುವ ಮುನ್ನ ಬಾಗುವುದು ಲೇಸೆಂಬಂತೆ ಈ ಜನಸಂಖ್ಯಾ ಅಪಾಯಕ್ಕೊಂದು ಮಹಾ ಉಪಾಯವೆಂದರೆ–ಕುಟುಂಬ ಯೋಜನೆ. ಈ ಮಾತನ್ನು ನಮ್ಮ ಜನ ಬೇಗ ಅರಿತಷ್ಟು ಕ್ಷೇಮ.

---

## ಸಹೃದಯ ಓದುಗ ಬಂಧುಗಳಲ್ಲಿ ವಿನಂತಿ.

ನಿಮ್ಮ ದೈಹಿಕ ಮತ್ತು ಮಾನಸಿಕ ಅನಾರೋಗ್ಯಕ್ಕೆ ಸದುತ್ತರಗಳು ದೊರೆಯುತ್ತವೆ. ನೀವು ಮತ್ತು ನಿಮ್ಮ ನೆರೆಯವರ ರೋಗಗಳ ವಿವರಗಳನ್ನೊಳಗೊಂಡ ಪ್ರಶ್ನೆಗಳನ್ನು "ಸಿದ್ಧಗಂಗಾ ಮಾಸಪತ್ರಿಕೆ" ಸಂಪಾದಕರಲ್ಲಿ ಕಳುಹಿಸಿಕೊಡಿ. ಅನುಭವೀ ವೈದ್ಯರುಗಳ ಚಿಕಿತ್ಸಾರೂಪ ಸೂಕ್ತ ಸಲಹೆಗಳನ್ನು ಮುಂದಿನ ಸಂಚಿಕೆಗಳಲ್ಲಿ ಪ್ರಕಟಿಸುತ್ತೇವೆ.

ಸಂಪಾದಕರು
**ಸಿದ್ಧಗಂಗಾ ಮಾಸಿಕ**
ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲೆ.

---

ಮಾಚಿಗೆ ಮನೆ ಕಟ್ಟಿ ಬೆಳಗಿಸುವ, ಮನೆ ಸುಟ್ಟು ಬೂದಿಮಾಡುವ ಎರಡೂ ಶಕ್ತಿಗಳಿವೆ, ಇದನ್ನರಿತ ಮಾನವ ಮಾತನ್ನು ಮಾನವೀಯತೆಯಿಂದ ಬಾಳಲು ಸೃಷ್ಟ್ಯಾತ್ಮಕ ಶಕ್ತಿಯನ್ನಾಗಿ ಉಪಯೋಗಿಸಬೇಕು.

—ಶ್ರೀವಾಣಿ

# ಕಾಶ್ಮೀರ ಶಿವಾದ್ವೈತ ಸಿದ್ಧಾಂತ

—ದಿ. ಜೆ. ರುದ್ರಪ್ಪ

ಸಂಪೂರ್ಣವಾಗಿ ತತ್ವ ಸಾಕ್ಷಾತ್ಕಾರವನ್ನು ಪಡೆದಿರುವ ಜ್ಞಾನಿಗಳು ತತ್ವಗಳನ್ನು ಮೂವತ್ತಾರು ಎಂದು ನಿರೂಪಿಸಿರುತ್ತಾರೆ. ಪ್ರಕೃತದಲ್ಲಿ ನಮಗೆ ಆ ಮೂವತ್ತಾರು ತತ್ವಗಳು ವಿಶದವಾಗಿ ತೋರದಿದ್ದರೂ ಪಿಂಡಾಂಡದಲ್ಲಿಯೇ ಎಲ್ಲಾ ಅಂಶಗಳೂ ಅಡಗಿರುವುದೆಂಬ ತಿಳಿವಳಿಕೆಯಿಂದ ಅನುಭವಕ್ಕೆ ಬರುತ್ತಿರುವ ಕೆಲವು ತತ್ವಗಳ ಸಹಾಯದಿಂದ ಅನುಭವಕ್ಕೆ ಬಾರದಿರುವ ತತ್ವಗಳನ್ನು ಸಾಕ್ಷಾತ್ಕರಿಸ ಬಹುದು. ಇದಕ್ಕೆ ಕೆಲವು ನಿಯಮಗಳನ್ನೂ ಉಪಾಯಗಳನ್ನೂ ಸೂಚಿಸಿರುತ್ತಾರೆ. 'ದೃಷ್ಟೇನ ಅದೃಷ್ಟಸಿದ್ಧಿಃ;' ತಿಳಿದದ್ದರಿಂದ ತಿಳಿಯದೆ ಇರುವುದನ್ನು ತಿಳಿಯಬೇಕೆಂಬ ನಿಯಮದಂತೆ ತತ್ವಸಾಕ್ಷಾತ್ಕಾರವನ್ನು ಅನುಮಾನದಿಂದಲೂ ಭಾವನಾ ಬಲದಿಂದಲೂ ಸಾಧಿಸಬೇಕು. ಮೊದಲು ತಿಳಿವಳಿಕೆ, ಅನಂತರ ಇಚ್ಛೆ, ತರುವಾಯ ಪ್ರಯತ್ನ, ಕೊನೆಯದಾಗಿ ಸಾಕ್ಷಾತ್ಕಾರ ಈ ರೀತಿಯಾಗಿ ಮೊದಲು ನಮಗೆ ಶಾಸ್ತ್ರ ದಿಂದ ತಿಳಿವಳಿಕೆಯುಂಟಾಗುತ್ತದೆ. ನಮ್ಮ ಸಂಸ್ಕಾರಾನುಗುಣವಾಗಿ ಇಚ್ಛೆಯುಂಟಾಗುತ್ತದೆ. ನಮ್ಮ ಧೈರ್ಯ ಶ್ರದ್ಧೆಗಳಿಗನುಸಾರವಾಗಿ ಪ್ರಯತ್ನ ನಡೆಯುತ್ತದೆ. ನಮ್ಮ ಪ್ರಯತ್ನದ ವೈಶಿಷ್ಟ್ಯಕ್ಕನುಸಾರವಾಗಿ ಫಲಪ್ರಾಪ್ತಿಯಾಗುತ್ತದೆ. ಈ ಕ್ರಮದಲ್ಲಿ ನಾವು ತತ್ವಗಳನ್ನು ವಿವೇಚಿಸಬೇಕಾಗುತ್ತದೆ.

ಮೂವತ್ತಾರು ತತ್ವಗಳ ಸ್ವರೂಪ ನಿರೂಪಣೆಯು ಈ ಮುಂದೆ ವಿವರಿಸಿರುವ ರೀತಿಯಲ್ಲಿದೆ.

## ಶುದ್ಧಾಧ್ವಗಳು

**ಶಿವತತ್ವ :–** ಚಿತ್, ಆನಂದ ಇಚ್ಛಾಜ್ಞಾನ ಕ್ರಿಯಾಶಕ್ತಿಗಳಲ್ಲಿ ಜ್ಞಾನ ಇಚ್ಛಾ ಕ್ರಿಯಾಶಕ್ತಿಗಳು ಸಮಾನವಾಗಿದ್ದು ಅಲೆಗಳಿಲ್ಲದ ಸಮುದ್ರದಂತೆ ಪ್ರಶಾಂತವಾದ ಚಿದ್ರೂಪದಿಂದಿರುವವನೇ ಶಿವನು. ಆ ಸ್ಥಿತಿಯಲ್ಲಿ 'ಅಹಂ' 'ಇದಂ' ಎಂಬ ಭೇದ ವಿಲ್ಲ. ಕರ್ತೃ ಕರ್ಮ ಕ್ರಿಯಾರೂಪವಾದ ವ್ಯತ್ಯಾಸಗಳಿಲ್ಲ. ಮುಂದೆ ಸಪ್ತಮಾತೃ ಪ್ರಮಾತೃಗಳ ರೂಪದಲ್ಲಿ ಬದಲಾವಣೆಯಾಗುವ ಕಾಲದಲ್ಲುಂಟಾಗುವ ಮಲಗಳಿಲ್ಲ, ಅಹಂಕಾರವೂ ಇಲ್ಲ. ಇದು ಪೂರ್ಣವಾದ ಚಿದ್ರೂಪವಾಗಿರುತ್ತದೆ, ಇದು ವಿಶ್ವಾತ್ಮಕವಾಗಿ ಮಿಕ್ಕ ೩೫ ತತ್ವಗಳನ್ನೊಳಗೊಂಡಿದೆ. ಇಲ್ಲಿನ ಶಿವನಿಗೆ ಅನಾಶ್ರಿತ ಶಿವನೆಂದು ಹೇಳುತ್ತಾರೆ.

**ಶಕ್ತಿತತ್ವ :–** ಪ್ರಶಾಂತವಾದ ಚಿತ್ಸಮುದ್ರದಲ್ಲಿ 'ಈಷತ್ಸ್ಫುರತ್ತಾ' ಅಂದರೆ
ಲ್ಪ ಚಲನವಾಗಿ ಜ್ಞಾನ ಇಚ್ಛಾಕ್ರಿಯಾಶಕ್ತಿಗಳು ಜ್ವಾಲೆಯಿಂದ ಹೊರಟ ಕಾಂತಿ
ಂತೆ ಹೊರ ಹೊಮ್ಮಿದರೆ ಅದು ಶಕ್ತಿ ತತ್ವವಾಗುತ್ತದೆ. ಶಿವತತ್ವದಲ್ಲಿ ಚಿತ್
ತಿಯು ಪ್ರಧಾನವಾಗಿರುತ್ತವೆ. ಶಕ್ತಿತತ್ವದಲ್ಲಿ ಆನಂದ ಶಕ್ತಿಯು ಪ್ರಧಾನವಾಗಿರು
ದೆ. ಶಿವತತ್ವದಿಂದ ಶಕ್ತಿತತ್ವವು ಸಂಪೂರ್ಣವಾಗಿ ಭಿನ್ನವಲ್ಲ. 'ದೀಪ ಪ್ರಭಾ'
ನ್ಯಾಯದಂತೆ ಒಂದನ್ನೊಂದು ಬಿಡದೆ ಇರುತ್ತದೆ. ಚಿಚ್ಛಕ್ತಿಯಿಲ್ಲದೆ ಆನಂದ ಶಕ್ತಿ
ಲ್ಲ. ಒಂದಕ್ಕೊಂದು ಪರಸ್ಪರ ಅಧೀನ.

**ಸದಾಶಿವ ತತ್ವ :–** ಇದು ಮೂರನೆಯತತ್ವ, ಇಲ್ಲಿ ಹಿಂದಿನ ಶಿವ ತತ್ವಗಳಿ
ಂತ ಮುಖ್ಯವಾದ ಬದಲಾವಣೆ ಎಂದರೆ 'ಅಹಂತಾಚ್ಛಾದಿತ ಅಸ್ಪಷ್ಟ ಇದಂತಾ'
ಂದು ಶಾಸ್ತ್ರದಲ್ಲಿ ಹೇಳಿದೆ. 'ಅಸ್ಪಷ್ಟ ಇದಂತಾ' -ಅಂದರೆ ಸ್ವರೂಪಾ ಭಿನ್ನವಾಗಿ
ುವ ವಿಶ್ವಗೌಣವಾದ ಗ್ರಾಹ್ಯತ್ವ. 'ಅಹಂತಾ' ಅಂದರೆ ಗ್ರಾಹಕತ್ವ. ಇಲ್ಲಿ ಗ್ರಾಹ್ಯಕ
ಾವವು ಪ್ರಧಾನವಾಗಿದ್ದು ಗ್ರಾಹ್ಯ ಭಾವವು ಪರಾಪರ ವಿಶ್ವರೂಪವಾಗಿ ಗೌಣವಾಗಿ
ುತ್ತದೆ. ಅಸಂಖ್ಯಾತರಾದ ಪ್ರಮಾತೃಗಳು ಇಲ್ಲಿಂದ ಮೊದಲಾಗುತ್ತಾರೆ. ಈ ತತ್ವ
ದಲ್ಲಿರುವ ಪ್ರಮಾತೃಗಳಿಗೆ 'ಮಂತ್ರ ಮಹೇಶ್ವರ' ರೆಂದು ಹೆಸರು.

**ಈಶ್ವರ ತತ್ವ :–** ಈ ತತ್ವದಲ್ಲಿ 'ಗ್ರಾಹ್ಯ ಗ್ರಾಹಕ ಭಾವಗಳು ಸಮಾನವಾ
ಗಿರುತ್ತವೆ. ಉದ್ರಿಕ ಕ್ರಿಯಾಶಕ್ತಿ ! 'ಈಶ್ವರ' ಎಂದು 'ಶಿವದೃಷ್ಟಿ' ಯಲ್ಲಿ ಹೇಳಿದೆ.
ಈಶ್ವರ ಎಂದರೆ ಐಶ್ವರ್ಯ ಭಾವವುಳ್ಳವನು. ಈ ಕ್ರಿಯಾಶಕ್ತಿಯು ಮುಂದಿನ ತತ್ವ
ದಲ್ಲಿ ವಿಶಿಷ್ಟವಾಗಿರುತ್ತದೆ ಮತ್ತು ಮುಂದಿನ ತತ್ವಗಳ ಸೃಷ್ಟಿಗೆ ಕಾರಣವಾಗುತ್ತದೆ.
ಇಲ್ಲಿಯೇ ಇಚ್ಛಾ ಜ್ಞಾನ ಶಕ್ತಿಗಳು ವಿಭಿನ್ನವಾಗಿ ರೂಪಗೊಳ್ಳುತ್ತವೆ. ಈ ತತ್ವದಲ್ಲಿ
ರುವ ಪ್ರಮಾತೃ ವರ್ಗಕ್ಕೆ 'ಮಂತ್ರೇಶ್ವರ' ರೆಂದು ಹೆಸರು.

**ಶುದ್ಧ ವಿದ್ಯಾತತ್ವ :–** ಇಲ್ಲಿ ಗ್ರಾಹ್ಯ ಗ್ರಾಹಕ ಭಾವಗಳು ಸಮಾನಾಧಿ
ಕರಣ್ಯದಿಂದಿರುತ್ತವೆ. ಈ ತತ್ವದಲ್ಲಿ ಮುಂದಿನ ವಿಶ್ವವು ಭೇದ ಪ್ರಧಾನವಾಗಿದ್ದು
ಗ್ರಾಹಕರಿಗೆ ಪ್ರಮೇಯವಾಗಿರುತ್ತದೆ. ಇಲ್ಲಿರುವ ಪ್ರಮಾತೃಗಳಿಗೆ ಭೇದವೇ ಪ್ರಧಾನ
ವಾಗಿರುವ ವಿಶ್ವವೆಲ್ಲಾ ಪ್ರಮೇಯವಾಗಿರುತ್ತದೆ. ಅಂದರೆ ಇಲ್ಲಿನ ಪ್ರಮಾತೃಗಳು
'ಭಿನ್ನವೇದ್ಯ ಪ್ರಧಾತ್ಮಕ' ವಾದ ವಿಶ್ವವನ್ನೆಲ್ಲಾ ತಿಳಿಯುವವರಾಗಿರುತ್ತಾರೆ. ಇಲ್ಲಿನ
ಪ್ರಮಾತೃಗಳಿಗೆ 'ಮಂತ್ರ' ರೆಂದು ಹೆಸರು.

ಈ ಐದು ತತ್ವಗಳಿಗೂ ಶುದ್ಧ ವಿದ್ಯಾತತ್ವಗಳೆಂದು ಹೆಸರು. ಇದರಲ್ಲಿ ಮೊದಲ
ನೆಯದಾದ ಶಿವತತ್ವದಲ್ಲಿ ಶುದ್ಧ ಚಿದ್ರೂಪವಾದ ಪೂರ್ಣ ಹಂತಾನುಭವ. ಎರಡನೆ ಶಕ್ತಿ
ತತ್ವದಲ್ಲಿ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳ ಸ್ಫುರಣ. ಮೂರನೆಯ ಸದಾಶಿವ ತತ್ವದಲ್ಲಿ

ಗ್ರಾಹ್ಯ ಗ್ರಾಹಕಗಳಿಗೆ ಪ್ರಾರಂಭ. ನಾಲ್ಕನೆಯ ಈಶ್ವರ ತತ್ವದಲ್ಲಿ ಗ್ರಾಹ್ಯ ಗ್ರಾಹಕ ಗಳ ಸಮಪ್ರಧಾನತಾ. ಐದನೆಯ ಶುದ್ಧ ವಿದ್ಯಾತತ್ವದಲ್ಲಿ ಭೇದ ಪ್ರಧಾನವಾ ಗ್ರಾಹ್ಯಭಾವವೂ ಗ್ರಾಹಕ ನಿಷ್ಪತ್ತಿಯೂ ಆಗಿರುತ್ತದೆ. ಆ ಗ್ರಾಹಕರಿಗೆ ವಿಶ್ವವೆಲ್ಲ ಪ್ರಮೇಯ.

ಈಶ್ವರೋ ಬಹಿರುನ್ಮೇಷೋಂತಸ್ಸದಾಶಿವಃ ।
ಸಾಮಾನಾಧಿಕರಣ್ಯಂಚ ಸದ್ವಿದ್ಯಾಹಮಿದಂಧಿಯೋಃ ॥

**ಅಶುದ್ಧಾಧ್ವಗಳು :–** ಇವುಗಳಲ್ಲಿ ಮೊದಲನೆಯ ತತ್ವ ಮಾಯಾ ಮಾ ಯಾತಿ ಇತಿಮಾಯಾ–ಮಾತಿ ಎಂದರೆ 'ವಿಶ್ವಂ ಆತ್ಮಸಾತ್ಕರೋತಿ ಪ್ರಳಯೇ ಪ್ರಳಯಕಾಲದಲ್ಲಿ ವಿಶ್ವವನ್ನು ತನ್ನಲ್ಲಿ ಉಪಸಂಹರಿಸಿಕೊಳ್ಳುತ್ತದೆ. ಯಾತಿ ಅಂದ 'ವಿಸೃಜತಿ ಸೃಷ್ಟೌ' ವಿಶ್ವವನ್ನು ಸೃಷ್ಟಿಮಾಡುತ್ತದೆ. ಮಾಯೆಯ ಅಚಿದ್ರೂಪವಾದ ಶರೀರಾದಿ ವಿಷಯಗಳಲ್ಲಿ ನಾನು ಎಂಬ ಪ್ರಮಾತೃತ್ವ ಅಭಿಮಾನವನ್ನುಂಟುಮಾಡು ತ್ತದೆ. ಭಾವಗಳು ಅಥವಾ ಪದಾರ್ಥಗಳು ಚಿನ್ಮಯಗಳೇ ಆಗಿದ್ದರೂ ಇವುಗಳೆಲ್ಲಾ ಬೇರೆ ಬೇರೆಯೆಂದು ಅಭಿಮಾನವನ್ನು ಹುಟ್ಟಿಸುತ್ತದೆ. ಎಲ್ಲಾ ವಿಧದಲ್ಲಿಯೂ ಪದಾ ರ್ಥಗಳ ತತ್ವಸ್ವರೂಪವನ್ನು ಮರೆಸಿ ಭೇದಜ್ಞಾನವನ್ನುಂಟುಮಾಡುತ್ತದೆ. ಚಿದ್ರೂಪ ವನ್ನು ಭಿನ್ನವಾಗಿಯೂ ಚಿತ್ತನ್ನು ಅಚಿತ್ತನ್ನಾಗಿಯೂ ತೋರಿಸುತ್ತದೆ. ಇದು ಪರ ಮೇಶ್ವರನ ಮಾಯಾಶಕ್ತಿಯಾಗಿರುತ್ತದೆ. ನಾನು ಎಂಬ ಅಹಂ ವ್ಯವಹಾರವು ಈ ಮಾಯೆಯ ಪ್ರಭಾವವೇ. ಹೆಂಡತಿ ಮಕ್ಕಳು ಐಶ್ವರ್ಯ ಮುಂತಾದ ದೂರವಾದ ವಸ್ತುಗಳಲ್ಲಿಯೂ ನಾನು ನನ್ನದು ಎಂಬ ತೀವ್ರ ಅಭಿಮಾನವನ್ನು ಹುಟ್ಟಿಸುತ್ತದೆ. ನಿದ್ದೆಯಲ್ಲಿಯೂ ಸಮಾಧಿಯಲ್ಲಿಯೂ ತಾನು ಇಲ್ಲವೆಂಬಂತಹ ಸ್ಥಿತಿಯಿದ್ದರೂ ಆಕಾಶ ದಂತೆ ವೇದ್ಯಭಾವದಿಂದ ನಾನು ಎನ್ನುವುದು ತೋರುತ್ತದೆ. ಶೂನ್ಯವಾಗಿ ಆಕಾಶದ ಹಾಗೆ ತಿಳಿಯಲ್ಪಡತಕ್ಕ ಸ್ಥಿತಿಯಿಂದ ನಾನು ಎಂದು ತೋರುತ್ತದೆ. ಉಚ್ಛ್ವಾಸ ನಿಶ್ವಾಸಗಳಲ್ಲಿ ನಾನು ಉಸಿರುಬಿಡುತ್ತೇನೆ. ಎಂಬ ಅಭಿಮಾನ ಬರುತ್ತದೆ. ನಾನು ಸಣ್ಣಗಾಗಿದ್ದೇನೆ ದಪ್ಪಗಾಗಿದ್ದೇನೆ ಎಂಬುದರಲ್ಲಿ ಶರೀರವೇ ನಾನು ಎಂದು ತೋರುತ್ತದೆ. ಆದುದರಿಂದ ಒಳಗೂ ಹೊರಗೂ ಇರುವ ತಿಳಿವಳಿಕೆಗಳು ಭಾವಗಳು ಅಥವಾ ಪದಾರ್ಥಗಳು ಚಿನ್ಮಾತ್ರಸಾರಗಳಾಗಿಯೇ ಇದ್ದರೂ ಬೇರೆ ಬೇರೆಯಾಗಿ ತೋರುತ್ತವೆ.

ತಸ್ಯೈಶ್ವರ್ಯ ಸ್ವಭಾವಸ್ಯ ಪಶುಭಾವೇ ಪ್ರಕಾಶಿಕಾ ।
ವಿದ್ಯಾಶಕ್ತಿಃ ತಿರೋಧಾನಕರೀ ಮಾಯಾಭಿಧಾಪುನಃ ॥

ಈಶ್ವರ ಪ್ರತ್ಯಭಿಜ್ಞಾ ೩-೭.

ಅಭೇದೇ ತ್ವೇಕರಸೇಭಾತೇ ಅಹಂತಯಾ ನಾತ್ಮನೀಕ್ಷಿತೇ ।
ಶೂನ್ಯೇ ಬುದ್ಧೌ ಶರೀರೇ ವಾಮಾಯಾ ಶಕ್ತಿಃ ವಿಜೃಂಭತೆ ॥

ಈಶ್ವರ ಪ್ರತ್ಯಭಿಜ್ಞಾ - ೩ - ೮

ದ್ಧ ಚಿನ್ಮಾತ್ರಾವಸ್ಥೆಯಲ್ಲಿ ಕೇವಲ ಪ್ರಮಾತೃವಾಗಿರುತ್ತಾನೆ. ಕಲಾದಿ ಪಂಚಕ ಂದ ಕೂಡಿದರೆ ಪ್ರಮಾತೃಪ್ರಮೇಯ ಎರಡೂ ಆಗುವನು, ಮೇಲಿನ ತತ್ವವು ಕೆಳ ನ ತತ್ವಗಳನ್ನೆಲ್ಲಾ ಆವರಿಸಿತ್ತೆಂಬುದು ನಿಯಮ ಹಾಗೆಯೇ ಮಾಯೆಯು ಕೆಳಗಿನ ುಕ್ಕ ಮೂವತ್ತು ತತ್ವಗಳನ್ನಾವರಿಸಿರುತ್ತದೆ. ಬೇರೆ ಸಂಪ್ರದಾಯಗಳಂತೆ ಇಲ್ಲಿ ಮಾಯೆ ಎಂಬುದಕ್ಕೆ ಮಿಥ್ಯೆ ಎಂಬರ್ಥವಿಲ್ಲ. ಇದು ಪರಮೇಶ್ವರನ ಶಕ್ತಿ. ಮೂವತ್ತು ತತ್ವಗಳ ರೂಪವನ್ನು ಪಡೆಯುವ ಮಹತ್ವವುಳ್ಳಂತಾದ್ದು. ಮಾಯೆಯನ್ನು ದಾಟ ಬೇಕೆನ್ನುವ ಪ್ರಾಚೀನರ ನುಡಿಗಳು ಶುದ್ಧ ವಿದ್ಯಾ ಪದ ಪ್ರಾಪ್ತಿಯಾಗಬೇಕೆಂದು ಸೂಚಿಸುತ್ತವೆ. ಮಾಯೆಯ ಮೇಲೆ ಶುದ್ಧ ವಿದ್ಯಾತತ್ವದ ಕೆಳಗಿರುವ ಅಂತರಸ್ಥಿತಿ ಯಲ್ಲಿ ವಿಜ್ಞಾನ ಕಲರೆಂಬ ಪ್ರಮಾತೃವರ್ಗವಿರುತ್ತದೆ. (ಮುಂದುವರಿಯುವುದು)

---




ಧ್ಯಾಯತೋ ವಿಷಯಾನ್ ಪುಂಸಃ
ಸಂಗಸ್ತೇಷೂಪ ಜಾಯತೇ।
ಸಂಗಾತ್ ಸಂಜಾಯತೇ ಕಾಮಃ
ಕಾಮಾತ್ ಕ್ರೋಧೋಽಭಿಜಾಯತೇ ॥

ಸುಖ ಸಾಧನಗಳನ್ನೇ ಹಂಬಲಿಸುತ್ತಿರುವವನಿಗೆ ಅವುಗಳಲ್ಲಿ ಪ್ರೀತಿಹುಟ್ಟುತ್ತದೆ. ಪ್ರೀತಿಯಿಂದ ಬಯಕೆ ಹುಟ್ಟುತ್ತದೆ. ಬಯಕೆಯಿಂದ ಸಿಟ್ಟು ತಲೆ ಹಾಕುತ್ತದೆ.

ಕ್ರೋಧಾದ್ಭವತಿ ಸಮ್ಮೋಹಃ
ಸಮ್ಮೋಹಾತ್ ಸ್ಮೃತಿ ವಿಭ್ರಮಃ।
ಸ್ಮೃತಿಭ್ರಂಶಾದ್ಬುದ್ಧಿನಾಶೋ
ಬುದ್ಧಿನಾಶಾತ್ ಪ್ರಣಶ್ಯತಿ ॥

ಸಿಟ್ಟಿನಿಂದ ಭ್ರಾಂತಿಯುಂಟಾಗುತ್ತದೆ. ಭ್ರಾಂತಿಯಿಂದ ನೆನಪು ಹಾರುತ್ತದೆ. ನೆನಪು ಹಾರುವುದರಿಂದ ಬುದ್ಧಿ ಹಾಳಾಗುತ್ತದೆ. ಬುದ್ಧಿ ಹಾಳಾಗುವುದರಿಂದ ಅವನು ಕೆಟ್ಟು ಹೋಗುತ್ತಾನೆ.

# ರಾಷ್ಟ್ರೀಯ ಭಾವೈಕ್ಯದ ಬುನಾದಿ

—ಎಲ್. ಆರ್. ಹೆಗಡೆ

ಇಂದಿನ ಮತೀಯ ಗಲಭೆಗಳ ವಾತಾವರಣದಲ್ಲಿ ದ್ವೇಷದ ವಿಷಗಾಳಿಯು ಹಬ್ಬುತ್ತಿದೆ. ಜಗಳ, ಕಡಿದಾಟ, ಬಡಿದಾಟಗಳಿಗೆ ಮೂಲ ಕಾರಣಗಳೇನೇ ಇರಲಿ, ಬಹು ಬೇಗನೆ ಅವುಗಳಿಗೆ ಮತೀಯ ದ್ವೇಷದ ಬಣ್ಣ ಹಚ್ಚಿ, ಮತೀಯ ಗಲಭೆಗಳಾ ಗುತ್ತಿರುವುದು ರಾಷ್ಟ್ರದ ಹಿತದೃಷ್ಟಿಯಿಂದ ಬಹಳ ಅನರ್ಥಕಾರಿಯಾದ ಬೆಳವಣಿಗೆ ಯಾಗಿದೆ.

ಇಂಥ ವಿಷಮ ಸಂಕಟಕಾಲದಲ್ಲಿ ನಮಗಿಂತಲೂ ಹಿಂದಿನ ಜನರು ಹೇಗೆ ಸಕಲ ಮತಗಳಿಗೆ ಔದಾರ್ಯ, ಸೌಹಾರ್ದವನ್ನು ತೋರಿಸಿ ಮತೀಯ ಸಹಿಷ್ಣತೆ ಯಿಂದ ಬಾಳಿದರು ಎಂಬುದು ಕರ್ನಾಟಕದ ಇತಿಹಾಸದ ಸಂಸ್ಕೃತಿಯ ಅಭ್ಯಾಸದಿಂದ ನಿಚ್ಚಳವಾಗಿರುಹಂತಹ ವಿಷಯವಾಗಿದೆ.
ನಮ್ಮ ಜನಪದ ಸಾಹಿತ್ಯದಲ್ಲಿ ಅಂಥ ಸಮನ್ವಯದೃಷ್ಟಿಯು ಹೇಗೆ ಕಾಣುತ್ತಿದೆ ಎಂಬುದನ್ನು ಈ ಚಿಕ್ಕ ಲೇಖನದಲ್ಲಿ ತೋರಿಸಲು ಯತ್ನಿಸಲಾಗುತ್ತಿದೆ.

ಹವ್ಯಕರ ಮದುವೆಯಲ್ಲಿ ಹೇಳುತ್ತಿದ್ದ ಜಲಕ್ರೀಡೆಯ ಹಾಡಿನಲ್ಲಿ ಪ್ರಾರಂಭ ದಲ್ಲಿ ಅನೇಕ ದೇವತೆಗಳಿಗೆ ಶರಣೆಂದುದಿದೆ. (ವಿದ್ಯೆಯ ಅಧಿಪನಾದ ಗಣಪನಿಗೆ ವಂದನೆ ಮಾಡಿದ ಸಾಲುಗಳು ಹಾರಿಹೋಗಿರಬೇಕು.)

ವರಹಾ ( ದಾ ) ನದಿತೀರವಾಸನಾದ ಉಲ್ಲಾಸನಾದ ನಾಗಭೂಷಣನನ್ನೂ ಸರ (ಶರ) ವಣಭವನಾದ ಸುಬ್ರಹ್ಮಣ್ಯನನ್ನು ಸ್ತುತಿಸಿ, ಗೀರ್ವಾಣ ಪಂಡಿತ ಗಂಗಾಧರನ ಪಾದಕ್ಕೆರಗುವೆನೆಂದಿದ್ದಾಳೆ ಹಾಡುಗಾರ್ತಿ.

ಹಾಡಿನ ವಿಷಯವಾದರೋ ಶ್ರೀಕೃಷ್ಣನು ಗೋಪಿಕಾಸ್ತ್ರೀಯರ ವಸ್ತ್ರಾಪಹರಣ ಮಾಡಿದುದು- ( ಅದನ್ನು ಇಲ್ಲಿ ಅಭ್ಯಾಸ ಮಾಡಿಲ್ಲ. )

ಮುಂದೆ, ಪುಂಡ ಕೀಚಕನನ್ನೂ ಲಂಡ ಕೌರವರನ್ನೂ ಮಂಡೆ ( ತಲೆ ) ಒಡೆದ ಉದ್ದಂಡ ಭೀಮನನ್ನು ಪುಂಡ ಉದ್ಧಾರಕನೆಂದು ಹೊಗಳಿ, ಪಂಡಿತರಕ್ಷಕ ನೆಂದು ತ್ರಾಹಿಯೆಂದು ಮರೆಹೊಕ್ಕಿದ್ದಾಳೆ.

ಆಮೇಲೆ ಮಧ್ವಮತೋದ್ಧಾರಕ (ಮಧ್ವಾಚಾರ್ಯ) ರನ್ನು ಶರಣೆಂದು ಮೊರೆ ಹೊಕ್ಕು ಹರಿಭಕ್ತಿಯನ್ನು ಕೊಡೆಂದು ಬೇಡಿದ್ದಾಳೆ.

ಅನಂತರ, ಅಖಿಳಾಂಕ (ಅಕಳಂಕ) ಚರಿತನಾದ ಅಂಜನಾಪುತ್ರ (ಹನುಮಂತ)
ಗೆ ವಂದಿಸಿದ್ದಾಳೆ.

ಇಲ್ಲಿ, 'ಹಲವು ದೇವರನ್ನು ನಂಬಿ ಹಾರುವ ಕೆಟ್ಟ' ಎಂಬ ಗಾದೆಯು ನೆನ ಾಗುತ್ತದೆ. ಆದರೆ, ದೈವಶಕ್ತಿ ಯಾವ ರೂಪದಿಂದಿದ್ದರೂ ವಂದನೀಯುವಾದುದು ಂಬ ವಿಚಾರ ಮನನೀಯವಾಗಿದೆ.

ಇನ್ನೊಬ್ಬ ತಾಯಿಯು ಶಿವ-ವಿಷ್ಣು ಮತ್ತು ಅವರ ಭಕ್ತರಲ್ಲಿನ ತನ್ನ ತ್ಮೀಯತೆಯನ್ನು ಬಹಳ ಸೊಗಸಾಗಿ ವ್ಯಕ್ತಮಾಡಿದ್ದಾಳೆ.

ಹರಿಯೆ ನಾರಾಯಣ ಗುರುವೆ ಸದಾಶಿವ
ಹರಿಭಕ್ತರ್‍ಯೆನ್ನ ಒಡಹುಟ್ಟು । ಕಾಶಿಯ
ಪುರದಲ್ಲಿ ಯೆನ್ನ ತವರ್ಮನೆ ॥

ಹರಿಭಕ್ತರು ತನ್ನ ಸೋದರರು ಎಂದ ಉಸಿರಿನಲ್ಲಿಯೇ ಕಾಶಿಯ ಪುರದ ಈಶ್ವರ-ಪಾರ್ವತಿ ತನ್ನ ತಂದೆ-ತಾಯಿ ಎಂದೂ ಸಹ ತಿಳಿಸಿ, ಹರಿಹರರಿಬ್ಬರಲ್ಲಿಯೂ ತನ್ನ ನಿಷ್ಠೆಯನ್ನು ವ್ಯಕ್ತಪಡಿಸಿದ್ದಾಳೆ.

ಮಹಾತ್ಮಾ ಬಸವಣ್ಣನವರು, "ದೇವನೊಬ್ಬ ನಾಮ ಹಲವು" ಎಂದು ಹೇಳಿ ದಲ್ಲಿ ಆ ದೇವನು ಮಹಾದೇವನೇ ಎಂಬುದನ್ನು ಸೂಚ್ಯವಾಗಿ ಹೇಳಿದ್ದರೂ ( ಆ ವಚನಕ್ಕೆ ಸಂಬಂಧಿಸಿ ಹೇಳಿದ ಮಾತು ಇದು, ಇಂದಿನ ಪರಿಸ್ಥಿತಿಯಲ್ಲಿ ಡಾ॥ ಜಿ. ಎಸ್-ಶಿವರುದ್ರಪ್ಪನವರು ನಾವು ದೇವರ (ಧರ್ಮದ) ಹೆಸರಿನಲ್ಲಿ ಭೇಧಭಾವವನ್ನು ತೋರಬಾರದು ಎಂದು ಹೇಳಿರುವುದು ಇಂದಿನ ಕಾಲದ ಭಾವೈಕ್ಯದ ಅಗತ್ಯವನ್ನು ಒತ್ತಿ ಹೇಳುತ್ತದೆ. 'ಜಗಕೆಲ್ಲ ಒಬ್ಬನೇ ದೇವ' ಎಂದ ಸರ್ವಜ್ಞನ ಮಾತು ನಿಜವೇ.

"ಅರಿತರೆ ಶರಣ, ಮರೆತರೆ ಮಾನವ" ಎಂಬುದನ್ನು ಇಂದಿನ ಅವಶ್ಯಕತೆಯ ದೃಷ್ಟಿಯಿಂದ, ಪೂಜ್ಯ ಶಿಶುನಾಳ ಶರೀಫ ಸಾಹೇಬರು, "ಸೋಹಂ ಶಿವನೇ ನಿನ್ನ ಹೊರತು ಅನ್ಯರು ಇಲ್ಲಾ" ಎಂದು ಹೇಳಿದಂತೆ, ಎಲ್ಲರಲ್ಲಿಯೂ ಶಿವನಿದ್ದಾನೆ. ಅವನೇ ಅಲ್ಲಾ ಎಂದು ಮುಸಲ್ಮಾನರು ನಂಬಿ ನಡೆದುಕೊಳ್ಳುತ್ತಾರೆ. ಎಂದು ವಿವರಿಸಬಹುದು.

ಇದರಂತೆ, " ಸರ್ವದೇವ ನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ " " ಎಲ್ಲ ದೇವರಿಗೂ ಮಾಡಿದ ನಮಸ್ಕಾರವು ಕೇಶವನನ್ನು ಸೇರುತ್ತದೆ" ಎಂದು ವೈಷ್ಣವ ಭಕ್ತನು ಸಮಾಧಾನ ತಾಳಿದರೆ ಧರ್ಮದ ಹೆಸರಿನಲ್ಲಿ ಜಗಳಕ್ಕೆ ಅವಕಾಶವಿಲ್ಲ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಕೆಲವು ಊರುಗಳಲ್ಲಿ ಹಾಲಕ್ಕಿ ಒಕ್ಕಲಿಗರು ಮುಸಲ್ಮಾನರ ಒಡನಾಟದಿಂದ ಅಲಾವಿ ಪದಗಳನ್ನು ಕನ್ನಡ-ಉರ್ದುಮಿಶ್ರಿತ ಭಾಷೆ ಯಿಂದ ಹೇಳುತ್ತಾರೆ. (ತುಂಬಾ ಅಶುದ್ಧವಾದ ಪದಸರಣಿ ಇವುಗಳಲ್ಲಿರುತ್ತದೆ.)

ಇಸ್ಲಾಂ ಧರ್ಮದ ಹಿರಿಮೆಯನ್ನು ಪ್ರತಿಪಾದಿಸುವಂತಹ 'ಬಿಸ್ಮಿಲ್ಲಾ ಪದಗಳ' ಕಥೆಗಳನ್ನೂ ಕಟ್ಟಿ, ಮುಸಲ್ಮಾನರು ಇವರಿಗೆ ಕಲಿಸುವುದುಂಟು.

ಇಂಥ ಸಂದರ್ಭಗಳಲ್ಲಿ ಒಮ್ಮೆ ಒಬ್ಬ ಹಾಲಕ್ಕಿ ಒಕ್ಕಲಿಗನಿಗೆ ಸಿಟ್ಟು ಬಂದಿರಬೇಕು. ಆಗ, ಸಹನಶೀಲನಾದ ಅವನ ನೆಂಟನು ಹೇಳುತ್ತಾನೆ.

ಇಲ್ಲಿ ಮುಸಲ್ಮಾನರ್ಹೇಳಿದ ಮಾತಿಗೆ
ಸಿಟ್ಟು ಮಾಡಬಾರದೊ ನೆಂಟಾ । ನಿಂಗ್
ಹಾಕುವೆ ಹಾಲು ಅನ್ನದಾ ಊಟಾ ( ಗದ್ದುಗಿ ಅವತಾರ )

ಎಂದು ಅವನನ್ನು ಸಮಾಧಾನಪಡಿಸುತ್ತಾನೆ.

ಮುಸಲ್ಮಾನರ ಅಲಾವಿ ಹಬ್ಬದ ಗದ್ದಿಗೆಯ ಮೆರವಣಿಗೆಯಲ್ಲಿ ರಸ್ತೆ (ಬೀದಿ) ಯಲ್ಲಿ ಈತ ಭಾಗವಹಿಸುತ್ತಾನೆ. ಅವರ ಗದ್ದಿಗೆಗೆ ವಂದನೆ ಸಲ್ಲಿಸಿ ಕಾಣಿಕೆಯನ್ನು ನೀಡುತ್ತಾನೆ.

ಸ್ವಾಮಿ ಸರಣ ಗದ್ದುಗಿ ಅವತಾರ
ನಮಗೆ ನಮಗೆ ಬೀದೀವಣ್ಣ ಚಲ್ ।
ಬಗತ ಮುಸಲ್ಮಾನರ ತಮ್ಮ । ಚಲ್ ।

ಇಸ್ಲಾಂ ಭಕ್ತ ಮುಸಲ್ಮಾನರ ತಮ್ಮ ಎಂದು ತನ್ನ ಒಡನಾಡಿ ಹಾಲಕ್ಕಿ ಒಕ್ಕಲಿಗನನ್ನು ಕರೆವ ಈತನ ಸಹೋದರಭಾವ ಎಷ್ಟು ಮೆಚ್ಚತಕ್ಕದು !

ಈ ಗದ್ದುಗಿ ಪೂಜೆ ಪುರದೊಳಗೆ ಹೆಚ್ಚು (ಹೆಚ್ಚಿನದು) ಎಂದು ( ಪೋಜೀ ಪುರೂದೊಳಗ್ಹೆಚ್ಚಂದ । ) ಹೇಳಿ ಹೊಗಳಿದ ಇವನ ಮರುಚಣವೇ,

"ಪೋಜೀ ಶಿವಗೆ ಸಲತಕ್ಕಂದ !"

ಈ ಪೂಜೆ ಶಿವನಿಗೆ ಸಲ್ಲತಕ್ಕುದು ಎಂಬ ಭಾವನೆಯಿಂದ ಈತನು ಮುಸಲ್ಮಾನರ ಈ ಹಬ್ಬದಲ್ಲಿ ಭಾಗವಹಿಸುತ್ತಾನೆ.

ಹಾಲಕ್ಕಿ ಒಕ್ಕಲಿಗರು ಈಗ ಮುಖ್ಯವಾಗಿ ತಿರುಪತಿ ತಿಮ್ಮಪ್ಪನ ಭಕ್ತರು ಆದರೆ, ಶಿವಭಕ್ತಿ ಮಾಡುವಲ್ಲಿ ಕೊಂದರೆ ಇಲ್ಲ. ಸಿದ್ದಿಯರ ಸುಗ್ಗಿ ಕುಣಿತದ ಪದಗಳಲ್ಲಿ ಮುಸಲ್ಮಾನರು ಹೇಳುತ್ತಾರೆ. ಅಲಿಮಲೆ ತುಂ ಸಲಾಂ ಹಿಂದು ಜನರಿಗೆ ಮಾಡುವೆ ಸಲಾಂ....

ಕೌರವಾರದ ಕಡೆಯ ಹಾಲಕ್ಕಿ ಒಕ್ಕಲಿಗರು ವೀರಶೈವರಿಂದ ಪ್ರಭಾವಿತರಾದವರು. ಸಿದ್ಧರಾಮನ ಗುಡಿಯಲ್ಲಿ ಪೂಜೆಮಾಡುತ್ತಾರೆ. ಯಾವದು ಹೆಚ್ಚು ? ಎಂಬ ಗಮಟಿ ಪದದಲ್ಲಿ. 2

ಮನಸುರಾ, ಜಾತೀಯ ವಳಗೇs
ಲಿಂಗಾಯ್ತೋರಂಬಾ ಜಾತಿಯೋ ಹೆಚ್ಚೋs........ ಎಂದು ಹೇಳುತ್ತಾರೆ.

ಅಶಿಕ್ಷಿತ ಜನ ಸಾಮಾನ್ಯರು ಬೇರೆ ಧರ್ಮ, ಮತ, ದೇವರುಗಳ ಕುರಿತು ಸಹಿಷ್ಣುತೆಯನ್ನು ತೋರುವುದು ಮಾತ್ರವಲ್ಲ; ಅವುಗಳನ್ನು ಹೇಗೆ ಗೌರವದಿಂದ ಕಾಣುತ್ತಾರೆ ಎಂಬುದನ್ನು ನಾವು ಕಾಣುತ್ತೇವೆ. ಆದರೆ, ಶಿಕ್ಷಿತರಾದ ಜನರು ಮಾಡುವ ಭೇದಭಾವ, ಅಜ್ಞಜನರನ್ನು ತಪ್ಪು ಹಾದಿಗೆಳೆದು, ಸಾಮಾಜಿಕ ವಿಪ್ಲವಗಳನ್ನು ಮಾಡುವುದನ್ನು ತಿಳಿದು ತುಂಬಾ ಖೇದವಾಗುತ್ತದೆ.

ಈ ಹಿನ್ನೆಲೆಯಲ್ಲಿ ತಮಿಳ್ನಾಡಿನ ಮೀನಾಕ್ಷಿಪುರದ ಹರಿಜನರು ಸಾಮೂಹಿಕವಾಗಿ ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿದ ಘಟನೆಯನ್ನು ವಿಚಾರಿಸಬೇಕು. ಇಸ್ಲಾಂ ಎಂಬ ಶಬ್ದದ ಅರ್ಥ ಶಾಂತಿ ಎಂದು ವಿವರಿಸಲಾಗುತ್ತಿದೆ. ಈ ಜನರು ಇಸ್ಲಾಂ ಧರ್ಮವನ್ನು ಸೇರಿದರೆ, ಇದರಿಂದ ನಿಜವಾಗಿಯೂ ಸಾಮಾಜಿಕ ಶಾಂತಿ. ರಾಷ್ಟ್ರಕ್ಕೆ ಹೆಚ್ಚಿನ ಬಲ ಬರುವುದಾದರೆ, ಇದನ್ನು ಎಲ್ಲ ವಿವೇಕಿಗಳೂ ಸ್ವಾಗತಿಸುತ್ತಾರೆ.

ಆದರೆ, ಪರಿಸ್ಥಿತಿ ಹಾಗಿಲ್ಲ. ಇದರಲ್ಲಿ ಪರದೇಶೀಯರ ಕೈವಾಡವಿರುವಂತೆ ಕಾಣುತ್ತದೆ. ಸೌದಿ ಅರೇಬಿಯಾದ ಪೆಟ್ರೋಡಾಲರ್ ದೊರೆಗಳು ಭಾರತದ ಮುಸಲ್ಮಾನರ ಸಂಖ್ಯೆಯನ್ನು ಬಹು ಶೀಘ್ರದಲ್ಲಿ ಇಪ್ಪತ್ತು ಕೋಟಿಗೆ ಹೆಚ್ಚಿಸಬೇಕೆಂಬ ಮಹತ್ವಾಕಾಂಕ್ಷೆಯನ್ನು ತಾಳಿ, ಅದಕ್ಕಾಗಿ ಕೋಟಿಗಟ್ಟಲೆ ಡಾಲರ್ ಹಣವನ್ನು ಖರ್ಚು ಮಾಡಲು ಸಿದ್ಧರಾಗಿರುವರೆಂದು ವೃತ್ತಪತ್ರಿಕೆಯಲ್ಲಿ ಒಂದು ವರ್ತಮಾನ ಬಂದಿತ್ತು.

ಪ್ರಧಾನಿ ಇಂದಿರಾ ಗಾಂಧಿಯವರಿಗೆ ಈ ಮತಾಂತರದಿಂದ ಮನಸ್ಸು ತುಂಬಾ ನೊಂದಿದೆಯೆಂದು ಅವರ ಭಾಷಣದ ವರದಿಯಿಂದ ತಿಳಿದುಬರುತ್ತದೆ. ಮುಸಲ್ಮಾನರ ಬೆಂಬಲವನ್ನು ವಿಶೇಷವಾಗಿ ಪಡೆದು ಅತ್ಯಧಿಕ ಬಹುಮತವನ್ನು ಪಕ್ಷಕ್ಕೆ ಗಳಿಸಿ ಕೊಟ್ಟಿರುವ ಅವರಿಗೂ ಸಹ ಇದರಿಂದ ದುಃಖವಾಗುವುದಕ್ಕೆ ಬಲವತ್ತರವಾದ ಕಾರಣವಿದೆ.

ಪಾಕಿಸ್ತಾನವು ಬಾಯಲ್ಲಿ ಸಂಧಾನಮಾಡುತ್ತ ಯುದ್ಧಕ್ಕೆ ಬಾಣ ಸಂಧಾನ ಮಾಡಲು ನಿರಂತರ ಪ್ರಯತ್ನವನ್ನು ನಡೆಸುತ್ತಿದೆ.

ದೇಶದಲ್ಲಿ ಮತೀಯ ಗಲಭೆಗಳು ಈಗಾಗಲೇ ಹೆಚ್ಚುತ್ತಿವೆ. ಇದನ್ನು ರಾಜಕೀಯ ಮತ್ತು ಇತರ ಸ್ವಾರ್ಥದಿಂದ ಕೂಡಿದ ಯಾರೋ ದುರುದ್ದೇಶದಿಂದ ಪ್ರೋತ್ಸಾಹಿಸುತ್ತಿದ್ದಾರೆ.

---

1 ಗುಮ್ಮಟಿಯಾ ಪದಗಳ ಪುಟ 7-8
2 ,, ,, ಪುಟ 65

ದೇಶದಲ್ಲಿ ಮತೀಯ ಕ್ಷೋಭೆ ಹೆಚ್ಚಿದರೆ ಪಾಕೀಸ್ಥಾನಕ್ಕೆ ಇದರಿಂದ ಹೆಚ್ಚಿನ ಅನುಕೂಲಗಳಿವೆ. ಹರಿಜನರಲ್ಲಿ ಬಹುಸಂಖ್ಯಾತರು ಇಸ್ಲಾಂ ಧರ್ಮವನ್ನು ಸೇರಿದರೆ, ಈ ಮತೀಯ ಗಲಭೆಗಳು ಕಡಿಮೆಯಾಗುವ ಬದಲು ಅತಿಶಯವಾಗಿ ಹೆಚ್ಚು ವುದೆಂಬಲ್ಲಿ ಅನುಮಾನವೇ ಇರಲಾರದು.

ದುರ್ದೈವಿ ಲೆಬನಾನ್ ದೇಶದಲ್ಲಿ ಅರ್ಧ ಮುಸಲ್ಮಾನ, ಅರ್ಧ ಕ್ರಿಶ್ಚನ್ ಧರ್ಮ ಅನುಸರಿಸುವ ಜನಗಳಿದ್ದಾರೆ. ಆ ದೇಶ ನಿರಂತರ ಯಾದವೀ ಸಮರದ ಅಗ್ನಿ ಕುಂಡದಿಂದ ದಗ್ಧವಾಗುತ್ತಿದೆ. ಇಂಥದೇ ಪರಿಸ್ಥಿತಿ ಭಾರತಕ್ಕೆ ಬರುವ ಭೀತಿಯು ನಿರಾಧಾರವಾದದ್ದೇನಲ್ಲ.

ಈ ಒಳ ಜಗಳಗಳಿಂದಾಗಿ, ಭಾರತ ದೇಶವು ದುರ್ಬಲವಾಗಿ ಹೊರಗಿನಿಂದ ಬರುವ ಆಕ್ರಮಣವನ್ನು ತಡೆದು ಕೊಳ್ಳುವ ಶಕ್ತಿಯನ್ನು ಕ್ರಮೇಣ ಕಳೆದು ಕೊಳ್ಳುವ ಪರಿಸ್ಥಿತಿ ಬರುವುದೆಂಬುದು ಭೀತಿಯ ಮುಖ್ಯ ಉದ್ದೇಶ. ನಮಗೆ ಯಾವುದೇ ಧರ್ಮದ, ಯಾವುದೇ ಮತದ ಜನರ ಮೇಲೆ ದ್ವೇಷವಿಲ್ಲ. ನಮಗೆ ಎಲ್ಲರೂ ಒಂದೇ. ನನಗೆ ವೈಯಕ್ತಿಕವಾಗಿ ಅನೇಕ ಜನ ಮುಸಲ್ಮಾನ, ಕ್ರಿಶ್ಚನ್ ಧರ್ಮಗಳ ಹಾಗೂ ಇತರ ಧರ್ಮಗಳ ಸ್ನೇಹಿತರಿದ್ದಾರೆ.

ಆದರೆ, ನಮ್ಮ ರಾಷ್ಟ್ರದ ಭವಿಷ್ಯದ ದೃಷ್ಟಿಯಿಂದ ವಿಚಾರ ಮಾಡಿದರೆ, ಇತ್ತೀಚೆಗೆ ನಡೆದ ಸಾಮೂಹಿಕ ಮತಾಂತರದ ಘಟನೆಗಳು ಬಹಳ ಗಂಭೀರವಾಗಿವೆ. ಮಠಾಧಿಪತಿಗಳೂ ಇತರ ಮುಂದಾಳುಗಳೂ ಈ ಸಮಸ್ಯೆಯ ಪರಿಹಾರಕ್ಕೆ ಸಾಧ್ಯವಿದ್ದ ಪ್ರಯತ್ನಗಳನ್ನು ನಡೆಯಿಸಬೇಕು.

---

## ಜಾನಪದ ಭಜನೆ ಹಾಡು

ಸಂಗ್ರಹ—ಕೆ. ವಿರೂಪಾಕ್ಷಗೌಡ

ಎಂಥ ದೈವುಳ್ಳ ಗಂಡನ ಮಾಡಿಕೊಂಡೆನವ್ವ !
ಗುರುವಿನಂತಲೆ ಬಂದು, ಸಾಂಬನಂತಲೆ ಬಂದು,
ಇಂಥ ಐಸಿರಿ ಕಂಡೆನವ್ವ । ಚಿಂತೆ ಇಲ್ಲದ ಕಂತು ನಾನು ಉಂಡೆನವ್ವ ॥
ಇಂದಿಗೆ ಚಿಂತಿ ಬಾರದ ಅಂತ ಬ್ರಹ್ಮನ ಕಂಡೆನವ್ವ
ದುಂಡ ಅಂಚಿನ ಸೀರಿ ಉಡುವದು ಬಿಡಿಸಿದನವ್ವ
ಬೆಂಕಿ ಕೆಂಡದಂಥ ಶಾಲಿ ತಂದು ಉಡಿಸಿದನವ್ವ
ಮೇಲುಗಿರಿ ಪಂಜರದೊಳಗಿರಿಸಿದನವ್ವ
ತಂದಿ ಚಿದಾನಂದನ ಅಂತ ಬ್ರಹ್ಮನ ಕಂಡೆನವ್ವ
ಎಂಥ ದೈವುಳ್ಳ ಗಂಡನ ಮಾಡಿಕೊಂಡೆನವ್ವ ॥

# ಸಾಧನೆ : ಪ್ರಗತಿಯ ಅಳತೆಗೋಲು

ಹತ್ತೊಂಭತ್ತು ತಿಂಗಳು ತುಂಬಿದ ಶ್ರೀ ಆರ್. ಗುಂಡೂರಾವ್ ಅವರ ನೇತೃತ್ವದ ಕರ್ನಾಟಕ ಸರಕಾರ ರೈತರ ಹಾಗೂ ದುರ್ಬಲ ವರ್ಗಗಳ ಏಳಿಗೆಗಾಗಿ ಕೊಟ್ಟ ಭರವಸೆಗಳನ್ನು ಈಡೇರಿಸುವಲ್ಲಿ ಯಶಸ್ವಿಯಾಗಿದೆ.

**ಭೂ ಸುಧಾರಣೆ** :– ಕರ್ನಾಟಕ ಭೂ ಸುಧಾರಣೆ ಕಾರ್ಯಕ್ರಮಗಳ ಅನುಷ್ಠಾನ ಕಾರ್ಯದಲ್ಲಿ ಮಹತ್ತರ ಪ್ರಗತಿ ಸಾಧಿಸಿದೆ. ಭೂ ನ್ಯಾಯ ಮಂಡಳಿಗಳ ಮುಂದಿದ್ದ ಲಕ್ಷ ಭೂ ವಿವಾದಗಳಲ್ಲಿ 6 ಲಕ್ಷಕ್ಕೂ ಹೆಚ್ಚು ವಿವಾದಗಳನ್ನು ಇತ್ಯರ್ಥಗೊಳಿಸಿದೆ. 3.8 ಲಕ್ಷ ಪ್ರಕರಣಗಳು ಗೇಣಿದಾರರ ಪರ ಇತ್ಯರ್ಥವಾಗಿದೆ. ವಿಧವೆಯರು, ಅಂಗವಿಕಲರು, ಸಣ್ಣ ಹಿಡುವಳಿದಾರರು ಮುಂತಾದವರಿಗೆ 19 ಕೋಟಿ ರೂಪಾಯಿಗಳಿಗೂ ಮಿಕ್ಕಿ ಪರಿಹಾರ ನೀಡಿಕೆ. ಬರುವ ನವೆಂಬರ್ 1 ನೇ ತಾರೀಖಿನ ಹೊತ್ತಿಗೆ ಎಲ್ಲ ವಿವಾದಗಳನ್ನೂ ಇತ್ಯರ್ಥಗೊಳಿಸಲು 284 ಭೂ ನ್ಯಾಯ ಮಂಡಳಿಗಳು ಕಾರ್ಯ ನಿರ್ವಹಿಸುತ್ತಿವೆ.

**ಇರಲೊಂದು ಮನೆ** :– ಕಡಿಮೆ ವೆಚ್ಚದಲ್ಲಿ ಮನೆಗಳ ನಿರ್ಮಾಣ ದುರ್ಬಲ ವರ್ಗಗಳಿಗೊಂದು ಆಶಾಕಿರಣ. ಇದುವರೆಗೆ ಜನತಾ ಗೃಹಗಳ ಯೋಜನೆಗಾಗಿ 40 ಕೋಟಿ ರೂ. ಗಳ ವೆಚ್ಚ. 2 ಲಕ್ಷಕ್ಕೂ ಮೀರಿ ಮನೆಗಳ ನಿರ್ಮಾಣ.

**ಸಮಾಜ ಕಲ್ಯಾಣ** :– ಪರಿಶಿಷ್ಟ ಜಾತಿಯವರ ಉನ್ನತಿಗಾಗಿ ಒಂದು ವಿಶೇಷ ಯೋಜನೆ ಪರಿಶಿಷ್ಟ ಜನಾಂಗದವರಿಗಾಗಿ ಒಂದು ಉಪಯೋಜನೆಯ ತಯಾರಿಕೆ. ಈ ಕಾರ್ಯಕ್ಕಾಗಿ ಈ ವರ್ಷ ಕ್ರಮವಾಗಿ 135 ಕೋಟಿ ಹಾಗೂ 3.09 ಕೋಟಿ ರೂ. ಗಳ ನಿಗದಿ.

**ಕಡತ ವಿಲೇವಾರಿ** : ಆಡಳಿತದಲ್ಲಿ ವಿಳಂಬವಾದರೆ ಸರ್ಕಾರ ಕೈಗೊಂಡ ಕಾರ್ಯಕ್ರಮಗಳ ಪ್ರಯೋಜನ ಜನತೆಗೆ ತಡವಾಗಿ ತಲುಪುತ್ತದೆ. ಆದ್ದರಿಂದ ಕಡತಗಳ ತ್ವರಿತ ವಿಲೇವಾರಿಗಾಗಿ ಸರ್ಕಾರದ ಕ್ರಮ. ಸರ್ಕಾರಕ್ಕೆ ಸಲ್ಲಿಸಲಾದ ಮನವಿಗಳ ಬಗ್ಗೆ ಎಲ್ಲ ಹಂತಗಳಲ್ಲೂ 15 ದಿವಸಗಳೊಳಗಾಗಿ ಕ್ರಮ ಕೈಗೊಳ್ಳುವಂತೆ ಆದೇಶ.

**ಹಳ್ಳಿಗೊಂದು ಶಾಲೆ** : ಬರುವ ನವೆಂಬರ್ ಒಳಗಾಗಿ ಪ್ರತಿ ಹಳ್ಳಿಗೂ ಒಂದು ಶಾಲೆ ಹಾಗೂ ಕುಡಿಯುವ ನೀರಿನ ವ್ಯವಸ್ಥೆಗೊಳಿಸಲು ಸರಕಾರ ಉದ್ದೇಶಿಸಿದೆ.

**ಪರಿಹಾರ ಕಾಮಗಾರಿ** : ಬರಗಾಲ ಪೀಡಿತ ಪ್ರದೇಶಗಳಲ್ಲಿ ಪರಿಹಾರ ಕಾಮಗಾರಿಗಳ ಅನುಷ್ಠಾನ ಪ್ರಗತಿದಾಯಕ. ಕಳೆದ ಜುಲೈ ಅಂತ್ಯದವರೆಗೆ ಈ ಕಾರ್ಯ

ಗಳಿಗಾಗಿ 11 . 82 ಕೋಟಿ ರೂ. ಗಳ ವೆಚ್ಚ. ಕುಡಿಯುವ ನೀರಿನ ಕೊರತೆ ನೀಗಲು ಬಾವಿಗಳನ್ನು ತೆಗೆಯಲು 53 ರಿಗ್ ಯಂತ್ರಗಳ ಬಳಕೆ. 2200 ಕೊಳವೆ ಬಾವಿಗಳ ನಿರ್ಮಾಣ.

**ರೈತರಿಗೆ ರಿಯಾಯಿತಿ :** ರೈತರು ಬೆಳೆದ ಫಸಲಿಗೆ ಹೆಚ್ಚಿನ ಬೆಂಬಲ ಬೆಲೆ 10 ಎಕರೆ ಒಳಗಿನ ಕೃಷಿ ಭೂಮಿಗೆ ಕಂದಾಯ ರದ್ದು. ನೀರಾವರಿ ಬಳಕೆಗಾಗಿ ಉಪ ಯೋಗಿಸುವ ವಿದ್ಯುಚ್ಛಕ್ತಿ ದರದಲ್ಲಿ ತೀವ್ರ ಕಡಿತ, ಕೃಷಿ ಬೆಳೆಗಳ ಮೇಲಿನ ಆದಾಯ ತೆರಿಗೆ ರದ್ದು. ನೀರಾವರಿ ಜಮೀನಿನ ಮೇಲಿನ ಅಭಿವೃದ್ಧಿ ತೆರಿಗೆ ರದ್ದು. ಕೃಷಿ ಕಾರ್ಮಿಕರಿಗಾಗಿ ಸಾಮೂಹಿಕ ವಿಮೆ ಜಾರಿ.

**ಸ್ವತಂತ್ರ್ಯ ಯೋಧರಿಗೆ ಪಿಂಚಣಿ ಜಾರಿ :** ರಾಜ್ಯ ಸರಕಾರ 9,000 ಸ್ವಾತಂತ್ರ್ಯ ಯೋಧರಿಗೆ ಪಿಂಚಣಿ ಮಂಜೂರು ಮಾಡಿದೆ. ಈ ಪಿಂಚಣಿಗೆ ಅರ್ಹರಾಗುವವರಿಗೆ ವರಮಾನದ ಮಿತಿ ಇಲ್ಲ. ಒಂದು ದಿವಸ ಜೈಲುವಾಸ ಅನುಭವಿಸಿದವರೂ ಕೂಡ ಪಿಂಚಣಿಗೆ ಅರ್ಹರು.

**ಅಂಗವಿಕಲರ ಕಲ್ಯಾಣ :** ಅಂಗವಿಕಲರಿಗೆ ಬೇಕಾಗುವ ಸಲಕರಣೆಗಳ ಖರೀದಿ ಗಾಗಿ ಧನಸಹಾಯ ಹಾಗೂ 40 ರೂ. ಗಳ ಮಾಸಾಶನ ನೀಡಿಕೆ. ಸರಕಾರಿ ವಲಯ ದಲ್ಲಿ ಹೆಚ್ಚಿನ ಉದ್ಯೋಗಾವಕಾಶಗಳ ಮೀಸಲಾತಿ ಶೇ. 2-4 ಕ್ಕೆ ಏರಿಕೆ.

**ಸಾಂಸ್ಕೃತಿಕ ಪರಂಪರೆಯ ಪುನಶ್ಚೇತನ:** ವೈಭವೋಪೇತ ದಸರ ಮಹೋತ್ಸವದ ಪುನರಾರಂಭ; ವಿಜಯನಗರದ ರಾಜಧಾನಿ ಹಂಪೆಯ ಜೀರ್ಣೋದ್ಧಾರ, 1982 ರಲ್ಲಿ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಪ್ರಪ್ರಥಮ ವಿಶ್ವ ಕನ್ನಡ ಸಮ್ಮೇಳನ ರಾಜ್ಯೋತ್ಸವದ ಬೆಳ್ಳಿಹಬ್ಬದ ಕೊಡುಗೆಯಾಗಿ ಬೆಂಗಳೂರಿನಲ್ಲಿ ದೂರದರ್ಶನ ಪುನಃ ಪ್ರಸಾರವ್ಯವಸ್ಥೆ.

ಕರ್ನಾಟಕ ಆಡಳಿತದಲ್ಲಿ ನಿಧಾನಕ್ಕೆ ಎಡೆಯಿಲ್ಲ.

## ಪ್ರ ಕ ಟ ಣೆ

**ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ.**

# ಕೊಡೆ

—ಎನ್. ಎಸ್. ಗದಗಕರ್

ಕೊಡೆಗಳ ಮಾತು ಬಂದಾಗೆಲ್ಲ, ವರಕವಿ ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿಯ ಬೆಳ್ಗೊಡೆಯ ಪ್ರಸ್ತಾಪ ಮರೆಯುವಂತಹದೇ ಅಲ್ಲ. ಆ ಶ್ವೇತಚ್ಛತ್ರದ ಪ್ರಶ್ನೆ ಉದ್ಭೂತವಾದಾಗ ಸತ್ಯಸಂಧ ರಾಜನ ಮನಃ ಸ್ಥಿತಿಯಾದರೂ ಎಂತಹುದು! ತನ್ನ ರಾಜ್ಯವನ್ನೇ ಹೆರವರಿಗೆ ದಾನಮಾಡಿದ ಕನಸೆಂದರೆ ದುಃಸ್ವಪ್ನವೇ! ಹೀಗೆ ಮನಸ್ಸು ವ್ಯಾಕುಲಿತವಾಗಿ ಗಾಸಿ ಗಾಸಿಯಾದಾಗ ರೂ ಪ ಶಾ ಲೆ ಹೊಲತಿಯರು ನೃತ್ಯ ಸಂಗೀತಗಳ ವೈಭವ ವೈಖರಿ ಪ್ರದರ್ಶಿಸಿದಾಗ ಅರಸನಿಗೆ ಆನಂದದ ಲಾಸ್ಯದಲ್ಲಿ ಲೋಲಾಡಿದಂತೆ ಅನುಭವವಾದರೆ ಅಚ್ಚರಿಯಲ್ಲ. ಅದೇ ಉನ್ಮಾದಾವಸ್ಥೆಯಲ್ಲಿ 'ಬೇಡಿದ್ದು ಕೊಡುವೆ' ಎಂದು ನುಡಿದು, ತನ್ನ ಮಾತು ನಡಿಸಲೆಂದು ಪ್ರಾರಂಭಕ್ಕೆ ಮುತ್ತಿನ ಮಾಲೆ ಅವರೆದುರು ಎಸೆಯುವನು. ಆದರೆ ಹೊಲತಿಯರು ಅಲ್ಪ ಸಂತುಷ್ಟಿಗಳೇ? ಛೆ! ಎಲ್ಲಿಯ ಮಾತು! ವಿಶ್ವಾಮಿತ್ರನ ಮಾಯೆಯಿಂದ ನಿರ್ಮಿತವಾಗಿ, ಹರಿಶ್ಚಂದ್ರನನ್ನು ಪೀಡಿಸಿ ಪೀಡಿಸಿ ಪರೀಕ್ಷಿಸಲು ಪ ಣ ತೊಟ್ಟವರು ಅವರು! ಅಂತೇ ಅವರು—' ರಾಜಾ, ನೀರಡಸಿದವರಿಗೆ ನೀರು ಕೊಡುವುದು ಬಿಟ್ಟು ತುಪ್ಪ ಕೊಟ್ಟಂತಾಯಿತು. ಡಗೆ ಸುತ್ತಿ ಸಾವಡಸುತ್ತಿರಲು ನಿನ್ನ ಮುತ್ತಿನ ಸತ್ತಿಗೆಯೇ ತಕ್ಕ ಉಡುಗರೆ' ಎಂದು ಉದ್ಗರಿಸುವರು. ಅರಸನು ಕ್ಷಣಕಾಲ ದಂಗು ಬಡೆದು ಅವಾಕ್ಕಾದರೂ ಇದು ತಾಯಿ, ಸತಿ, ಚತುರಂಗಬಲ, ಪ್ರತೀಕ, ತಂದೆ' ದೈವ,- ಎಂತೆಂತೋ ಅದರ ಮಹಿಮೆ ಬಣ್ಣಿಸುವವನು. ಆದರೂ ಲೋಭಿತನದ ಆರೋಪವೇನೂ ಅವನಿಗೆ ತಪ್ಪುವದಿಲ್ಲ. ಇದೇ ಬಗೆಯಾಗಿ ಕವಿಕುಲ ಗುರು ಕಾಳಿದಾಸನ ರಘುವಂಶದಲ್ಲಿ, ಮಾಯಾಸಿಂಹವು ದಿಲೀಪನಿಗೆ ಸತ್ತಿಗೆಯ ಹಿರಿಮೆಯನ್ನೂ ಅವನ ತಾರುಣ್ಯವನ್ನೂ ಅಮೌಲ್ಯ ರಾಜವಿಲಾಸವನ್ನೂ ಅವನ ತಾರತಮ್ಯ ಹೀನತೆಯನ್ನೂ—

' ಏಕಾತಪತ್ರಂ ಜಗತಃ ಪ್ರಭುತ್ವಂ
ನವಂ ವಯಃ ಕಾಂತಮಿದಂವಪುಶ್ಚ
ಅಲ್ಪಸ್ಯ ಹೇತೋರ್ಬಹುಹಾತುಮಿಚ್ಛಸ್'
ವಿಚಾರ ಮೂಢಃ ಪ್ರತಿಭಾಸಿಮೇ ತ್ವಂ.

ಎಂಬ ವಾಣಿಯಲ್ಲಿ ತಿಳಿಹೇಳುವಾಗ ಛತ್ರದ ಸ್ಥೂಲ ವಿಷಯವನ್ನು ಸಾಮಾನ್ಯರಾದರೂ ಅಲಕ್ಷಿಸುವದೆಂತು?

ಪ್ರಾಚೀನ ಅರ್ವಾಚೀನ ಕಾವ್ಯಗಳ ಊಹಾಪೋಹ ಬಿಟ್ಟು ಕೇವಲ ವಾಸ್ತ ವರಂಗಕ್ಕಿಳಿದರೆ, ನಿತ್ಯ ವ್ಯವಹಾರದಲ್ಲಿ ಕೊಡೆಯ ಬಗ್ಗೆ ಹಲವಾರು ಲೋಕೋಕ್ತಿ ಗಳು ಪ್ರಚಲಿತವಾದುದನ್ನು ಕಾಣುವೆವು. "ಹೊತ್ತು ಬಂದಂತೆ ಕೊಡೆ ಹಿಡಿ" ಎಂಬುದು ಧೀರ ಸಾಮಾನ್ಯರ ನುಡಿ. 'ಸಿಡಿಲು ಹೊಡೆದರೆ ಹಿಡಿದ ಕೊಡೆ ಕಾವುದೆ?' ಎಂಬ ನುಡಿಯಲ್ಲಿ ಕಾಲಪುರುಷನ ಮಹಿಮೆ ಮೆರೆಯುತ್ತಿದೆ! ಮಳೆಗಾಲದ ಬಿಸಿ ಲನ್ನೂ ಮನೆಯ ಗಂಡನ ನಗೆಯನ್ನೂ ನಂಬಕೂಡದೆಂಬ ಜಾಣ್ಣುಡಿಯಲ್ಲಿ, ನೇರ ವಾಗಿ ಆಗದಿದ್ದರೂ ಕೊಡೆಯು ವಿಷಯ ಕಣ್ಣುಕುಕ್ಕುವುದು, ಹಲವಾರು ಸಲ ನಾವು ಮ ಗಾಲದಲ್ಲಿಯು ಕೊಂಚ ಸೂರ್ಯ ಛಾಯೆಗೆ ಮೋಸ ಹೋಗಿ ಮುಂದೆ ಧೋ ಧೋ ಎಂಬ ಮಳೆಯ ಹೊಡೆತಕ್ಕೆ ಸಿಕ್ಕು ಪೇಚಾಡಿಲ್ಲವೇ? ನಿವೃತ್ತ ಅಧಿಕಾರಿಯಂತೆ ಅದ ನ್ನೇನು ಒಯ್ಯುವುದು ಎಂದು ಕೊಡೆ ಬಿಟ್ಟು ಮನೆಯಿಂದ ಹೊರಟದ್ದಕ್ಕೆ ಎಂತಹ ಪ್ರಾಯಶ್ಚಿತ್ತ! ನೆನಸಿಯೆ ಎಚ್ಚರಿಕೆ ತಳೆಯಬಹುದಾದ ವಿಷನಿವಿಷವದು!

ಮಳೆಗಾಲದ ಅವಿರ್ಭಾವದ ಸುಳಿ ಹತ್ತಿದಾಗ ಶ್ರೀರಂಗರ 'ಋತುಸಂಹಾರ' ವೆಂಬ ಹರಟೆ ತಾನಾಗಿಯೇ ಮಿಂಚಿ ಹೋಗುವುದು. ಅಲ್ಲಿ ಪೋಸ್ಟಮನ್ನನಿಗೆ ಆಫೀಸು ಕೊಡೆಯನ್ನೇನೂ ಕೊಟ್ಟಿರುವದು. ಆದರೆ ಅವನ ರಕ್ಷಣೆಗದಲ್ಲ! ಪತ್ರ ಗಳಿಗಾಗಿಯಂತೆ! ಎಂತಹ ವಿಡಂಬನೆ! ಪಾಪ, ಸರಳ ಹೃದಯಿ ಪೋಸ್ಟಮನ್ನನು ತಾನು ಉಳಿದರೆ ಮುಂದೆ ಪತ್ರ ಎಂದು ತಿಳಿದು, ಆತ್ಮರಕ್ಷಣೆ ಮಾಡಿಕೊಂಡ ದ್ದಕ್ಕೆ ಪತ್ರದ ವಿಳಾಸವೆಲ್ಲ ಮಳೆಯ ಹನಿಗಳ ಮೂಲಕ ಮಟ್ಟ ಮಾಯವಾಗಿ 'ಕೊಡೆ ಎಂಬನಾತ ಪತ್ರವನು' ಎಂಬ ಉದ್ಗಾರ ಹೊರಡಿಸಿದುದು ಔಚಿತ್ಯ ಸೀಮೆಯ ಲ್ಲಿಯೇ ಸರಿ. ಇನ್ನು ಎಷ್ಟು ಇಂಚು ಮಳೆಯಾಯಿತೆಂಬುದಕ್ಕೆ Raine gagae ಬೇಡವೇ ಬೇಡಂತೆ! ತಾವು ಹಾಕಿದ ಪಂಚೆಯಿಂದುಂಟಾದ ಕೆಸರಿನ ಕೆಂಪು ಕಲೆ ಗಳ ಶುದ್ಧ ಅಳತೆ ಮಾಡಿದರೆ ತೀರಿತಂತೆ! ಕೊಡೆಯ ಪ್ರಶ್ನೆ ಇಲ್ಲಿ ಬಾರದಿರುವುದೂ ಒಂದು ಸೋಜಿಗವೇ ಅಹುದು!

ಮುನ್ನಿನ ಮಳೆಯ ಮುನ್ಸೂಚನೆ ಆಕಾಶದಲ್ಲಿಯ ಕಾರ್ಮೋಡಗಳ ಕರಾಳ ಛಾಯೆಯಿಂದ ಎಂದು ವೈಜ್ಞಾನಿಕರು ಹೇಳಿದರೂ ಕೊಡೆಯ ಅವಿರತ 'ಖರೀದಿ' ಯಿಂದ ಎಂದು ನಾಗರಿಕರಾದ ನಾವು ಎದೆ ತಟ್ಟಿ ಹೇಳಬಹುದು. ಉಳಿದ ಋತು ಮಾನಗಳಲ್ಲಿ ಕೊಡೆಗಳು ಕಾಂತಿಹೀನವಾಗಿರುವವಲ್ಲವೆ? ರದ್ದಾದ ಟಿಕೇಟೆಂದು ಹೇಳ ಬಹುದು. ಶೇಕ್ಸ್‌ಪಿಯರ್ ಮಹಾಕವಿಯ ಉಪಮೆ ಕಡತಂದು ಹೇಳಬೇಕೆಂದರೆ Twice told tade ಎನ್ನುಬಹುದು ಏನೇ ಆಗಲಿ, ಆಗಲೇ ಅಂಗಡಿಗಳಲ್ಲಿ Beware of initations ಇಲ್ಲವೆ ನಕಲಿ ಮಾಲಿಗೆ ಮೋಸಹೋಗಬೇಡಿರಿ ಎಂಬ ಬೋರ್ಡುಗಳು ತೂಗು ಬಿದ್ದದ್ದು ಕಾಣುವುದು ಸಹಜ. ಕೇವಲ ಹೊರ

ನ ಝುಗ ಝುಗ, ಸಿಲೋನಿಲಾಯಿಡಿನ ಸಪ್ತವರ್ಣದ ಹಿಡಿಕೆ ನೋಡಿ ಕೊಂಡದ್ದಕ್ಕೆ
ಳ ಹಳಿಸುವದು ಇದ್ದೇ ಇದೆ. ಯಾಕೆಂದ ಝುಣ ಝುಣ ಎಂದು ರೂಪಾಯಿ ಎಣಿ
ದ್ದರೂ ಇದೇ ' ಖಾತ್ರಿ ' ಅರಿವೆ ನಾಲ್ಕು ದಿನದ ದೊಡ್ಡ ಸೆಳಕುಗಳಲ್ಲ ತನ್ನ ಶಕ
ೋರಿಸಿ ಮಾಯಾವಾದಿ ಶ್ರೀ ಶಂಕರ ಭಗವತ್ಪಾಸದರ ಸಿದ್ಧಾಂತದಂತೆ ತನ್ನ ವೈ
ಣ್ಣಕ್ಕ್ಯಾ ಮಾಲಿಕನ ಶರ್ಟು ( ಬುಶ್ ? ) ಪ್ಯಾಂಟುಗಳ ಬಣ್ಣಕ್ಕ್ಯಾ ಭೇದವೇ.
ಉಳಿಯದಂತೆ ವಾತ್ಸಲ್ಯ ಪ್ರಕಟಿಸುವುದು ಎಂತಹ ಕಾವ್ಯ ತನ್ಮಯತೆ !

ಇರಲಿ, ಇಂತಹ ಕೊಡೆ ಹಿಡಿದುಕೊಂಡಾದರೂ ಯಾರು ಯಾರು ಹೇಗೆ ಹೇಗೆ ಯಾವ ಯಾವ ಋತುಮಾನಗಳಲ್ಲಿ ಉಪಯೋಗಿಸಿಕೊಳ್ಳುವರೆಂಬುದು ನಿಜವಾ ಗಿಯೂ ಮೋಹಕವಾದ ವಿಷಯ. ತಮಗೆ ಬೇಡಾದ ನಿರುದ್ಯೋಗಿ ವ್ಯಕ್ತಿಗಳನ್ನಾ ಗಲಿ, ಶತ್ರು ಸಾಹಿತಿಯನ್ನಾಗಲಿ ಸಾಲಗಾರರನ್ನಾಗಲಿ ತಪ್ಪಿಸಲು ಇದೊಂದು ಪರಮ ಶ್ರೇಷ್ಠ ಸಾಧನ ! ವಯಸ್ಕರಿಗೆ ಕೊಡೆ ವಾಕಿಂಗ್‌ಸ್ಟಿಕ್ಕಾಗಿ ಪರಿಣಮಿಸಿದರೆ, ಇತರ ರಿಗೆ ದನಕರುಗಳನ್ನು ಬೆದರಿಸಲು ಉಪಯೋಗ. ಎಲ್ಲ ಕಾಲದಲ್ಲಿಯೂ ಕೊಡೆ ಯಿಂದ ಅಗಲಲಿಲ್ಲವೆಂದು ಇಂಗ್ಲೇಂಡಿನ ಪ್ರಧಾನ ಸಚಿವ ಜೇಂಬರ್ಲೇನರಿಗೆ ಛತ್ರಿ ಜೇಂಬರ್ಲೇನರೆಂದು - ವಿವೇಕಿಗಳು ಅಡ್ಡ ಹೆಸರೇ ಕೊಡಲಿಲ್ಲವೆ ?

' ಆಕಾಶವೇ ದೊಡ್ಡ ಕೊಡೆ ' ಎಂದು ಹೇಳುವ ತಾತ್ವಿಕರಿಗೆ ಕೊಡೆಯ ನಿಜವಾದ ರಂಜಕರೂಪ ಗೊತ್ತಿರಲಿಕ್ಕಿಲ್ಲ, ಕನ್ನಡದ ಲೋಕಪ್ರಿಯ ಕವಿ ಪಂಜೆಯ ವರ ಪದ್ಯ ಓದಿದವರಿಗೆ ' ಕೊಡೆಯೊಡೆಯರ ' ಹೃದಯದ್ರಾವಕ ಸ್ಥಿತಿ ಬಣ್ಣಿಸಿ ಹೇಳುವ ಅಗತ್ಯವಿಲ್ಲ. ಅವರ ಕೊಂಕಣ ಸೀಮೆಯ ' ತೆಂಕಣಗಾಳಿಯು ' ಮಹಾ ನಿರ್ದಯಿ. ' ಬಡ ಮುದುಕರ ಕೊಡೆಗರಿ ಹರಿದಾಡಿಸಿ ' ಬಿಡುವದು. ತೆಗಂನು ಲಾಗಿ ಸುವದು; ಹುಡುಗರ ತಲೆ ತಲೆ ಟೊಪ್ಪಿಗೆಯನ್ನು ದಡಬಡಿಸುವುದು; ಅಡಿಕೆಯ ಬಾಗಿಸುವದು. ತೆನೆ ಇಬ್ಬಾಗಿಸುವದು. ಎಲ್ಲ ತೀರ ಸಾಮಾನ್ಯ ಲೀಲೆಗಳೆ !

ಕೊಡೆಯ ವಿಶ್ವರೂಪವೆಂತಿದ್ದರೂ ಅದರ ಆಕಾರದಲ್ಲಿ ಉಳಿದ ವೇಷಭೂಷ ಗಳಲ್ಲಿಯಂತೆ- ಇಂದಿನ ಮನ್ವಂತರದಲ್ಲಿ ಹೆಚ್ಚು ಕಡಿಮೆ, ಅಸಂಬದ್ಧತೆ, ಕುರೂಪ ತಲೆದೋರದಿದ್ದುದು ನಿಜವಾಗಿಯೂ ಸಾಮಾಜಿಕ ದೃಷ್ಟಿಯಿಂದ ಕ್ಷೇಮಕರವೇ ಆಗಿದೆ. ಅಷ್ಟೇ ಏಕೆ ? ಮಳೆಗಾಲದಲ್ಲಿ ಕೊಡೆ ಇಲ್ಲದೆ ನಡೆಯುವಂತೆಯೇ ಇಲ್ಲ. ಶಿಷ್ಟಾಚಾ ರಕ್ಕನುಗುಣವಾಗಿ ಒಬ್ಬರು ತಮ್ಮ ಒಂದೇ ಕೊಡೆಯನ್ನು ಹಲವಾರು ಜನರಿಗೆ ಹಿಡಿ ದಾಗ ಯಾರಿಗೂ ತೊಯಿಸಿಕೊಳ್ಳುವದು ತಪ್ಪುವುದಿಲ್ಲ. ಅದರೂ ವ್ಯವಹಾರದಲ್ಲಿ - ಸುಶಿಕ್ಷಿತ ಸಮಾಜದಲ್ಲಿ ಒಬ್ಬನಿಗೆ ಒಂದು ಕೊಡೆ ಎಂದು ಲೆಕ್ಕವೇ ಇದೆ ಮಳೆ ಬಂದಾಗ ಸಭೆ ನಡೆದಿದ್ದರೆ ಸ್ಥೂಲಮಾನದಿಂದ ಜನಸಂಖ್ಯೆ ಗೊತ್ತು ಮಾಡಿಕೊ ಳ್ಳಲು ಒಬ್ಬ ಹಳ್ಳಿವಾಡದವನು ಕಾಲುಗಳನ್ನೆಣಿಸಿ ಎರಡರಿಂದ ಭಾಗಿಸಿದ್ದನ್ನು ಕೇಳಿ ಲ್ಲವೇ ನೀವು ?

ಕೊಡೆ ಇಂತು ಅನಿವಾರ್ಯವೆನಿಸಿದಾಗ ಅವುಗಳ ಬಳಗ ಕಾಣಬೇಕಾದರೆ ದೊಡ್ಡ ನಗರದ ಬರಬೀದಿಗೆ ಹೋಗಿ. ಹತ್ತು ಹದಿನೈದು ನಿಮಿಷ ನಿಂತರೆ ಸಾಕು.. ನೀರಿಕ್ಷಕನ ಸೂಕ್ಷ್ಮ ರೀವಿಯಲ್ಲಿ ! ಸುಶಿಕ್ಷಿತ ಸ್ತ್ರೀಯರ ಕೊಡೆಗಳಿಗಂತೂ ಹಣ ಕೊಟ್ಟು ಕೊಂಡದಕ್ಕೆ ಕೊಡೆ ಎನ್ನಬೇಕು. ಬೇಕಾದಷ್ಟು ರಂಗು ರಂಗು ಇರಬಹುದವು ! ನಾಜೂಕು ಇದ್ದಿತು. ಆದರೆ ಎಲ್ಲ ಗಾತ್ರದವರಿಗೂ ಅದೇ ಆಕಾರ; ಏನೂ ವಿಚಿತ್ರ ಉಪಯುಕ್ತತೆಯ ಮಾನದಿಂದ ಇವನ್ನಳೆಯದೆ ಆಭರಣವೆಂದರೆ ಎಲ್ಲ ಸಮಸ್ಯೆ ಪೂರ್ತಿಯಾಗಿ ಹೋಗುವವು.

ಮಹಿಳೆಯರ ಮಾತು ಇಂತಿದ್ದರೂ ಸದ್ಗೃಹಸ್ಥರು ಹೊಸ ಕೊಡೆಯನ್ನು ಬಹಳ ಜತನವಾಗಿರಿಸುವರು. ಹೆಚ್ಚು ಹಣ ತೆತ್ತಾಗಂತೂ ಅದನ್ನು ಹೊರಗೇ ತೆಗೆಯುವದಿಲ್ಲ. ಹಲವು ದಿನ ಮಳೆಯಲ್ಲಿ ಸಹ ಅದನ್ನು ಏರಿಸದೇ ಹೊರಡುವರೆಂದ ಮೇಲೇ ಆ ಮೋಹಕತೆಗೆ ಬೇರೆ ನಿದರ್ಶನಗಳೇ ಬೇಡ. ದುರ್ದೈವದಿಂದ ಇವು ದೇವಸ್ಥಾನ, ಸಭೆ ಸಮ್ಮೇಲನ, ಉಪಹಾರಗೃಹ, ಥಿಯೇಟರುಗಳಲ್ಲಿ ಕಳವಾಗಿ ಹೋದರೆ ಎಂತಹ ಅನಿರ್ವಚನೀಯ ವ್ಯಥೆ ! ವಿವಹವ್ಯಥೆಯನ್ನೂ ಮೀರಿಸುವುದೇನೋ ಇದು ! ವಾಚ್ ಪ್ಯಾಂಟ್ ಸೈಕಲ್ ಕನ್ನಡಕಗಳಂತೆ ಕೊಡೆಯೂ ಒಂದು ಇಂತಹ ಲೋಭೀಗಳಿಗೆ Untransferrable Properties ಎನಿಸಿದರೆ ಸಹಜವೇನೂ ಇಲ್ಲ- Sceptre and crown must tumble down and with dust be equal made ಎಂಬ ಆಂಗ್ಲ ಕವಿ ಶೆಲ್ಲಿಯ ಉದ್ಗಾರವು ಮಾನವತೆಯ ಹಿರಿ ಲಕ್ಷಣ ವಿವರಿಸಿ ತಾರತಮ್ಯಕ್ಕೆ ಬೆಲೆ ಇಲ್ಲವೆಂದು ಹೇಳುತ್ತಿದ್ದರೆ ಕೊಡೆಯಾದರೂ ಇಂದು ಎಲ್ಲರ ಸಾಮಾನ್ಯ ಸೊತ್ತಾಗಿದೆ. ಮೇಲು ಕೀಳೆಂಬ, ದರ್ಜೆಯನ್ನನು ಲಕ್ಷಿಸದೆ ಎಲ್ಲರ ಕೈವಾರವಾಗಿರುವ ಕೊಡೆ ಕೊನೆ ಸಮತಾವಾದದ ಪ್ರತೀಕವೆಂದು ಹೊಳೆಯುವದಲ್ಲವೆ ?

---

ಪ್ರಾಮಾಣಿಕ ವ್ಯಕಿಗಳು ದುಷ್ಟ ಶಕ್ತಿಗೆ ಬಲಿಯಾಗುತ್ತಿರುವ ಸಂದರ್ಭವೇ ಹೆಚ್ಚು. ಪ್ರಾಮಾಣಿಕರು, ಅಧಿಕಾರಿಗಳ, ಶ್ರೀಮಂತರ, ಪುಂಡರ ಅನೀತಿವಂತರ ಕೈಗೆ ಸಿಕ್ಕಿ ಆತ್ಮ ಹತ್ಯೆ ಮಾಡಿಕೊಳ್ಳುತ್ತಿದ್ದಾರೆ, ಇಲ್ಲವೆ ನರಳಿ ನರಳಿ ಮಾನಸಿಕ ಚಿಂತೆಯಿಂದ ಸಾಯುತ್ತಿದ್ದಾರೆ. ಪ್ರಾಮಾಣಿಕರ ಬಲಿ ಹೆಚ್ಚಾದಂತೆ ಅನ್ಯಾಯ ತಾಂಡವನಾಡುತ್ತದೆ ದೇಶದ ಪ್ರಗತಿ ಕುಂಟಿತವಾಗುತ್ತದೆ.

— ಶ್ರೀವಾಣಿ

# ಮದ್ಯಪಾನದ ದುಷ್ಪರಿಣಾಮಗಳು

—ಡಾ|| ಹೆಚ್. ಡಿ. ಚಂದ್ರಪ್ಪ

**ರಕ್ತದಲ್ಲಿ ಮದ್ಯದ ಪ್ರಮಾಣವು ಹೆಚ್ಚುತ್ತಲೇ ಅದರ ಪರಿಣಾಮವು ಮಿದುಳಿನ ಮೇಲೆ ತಕ್ಷಣ ಆಗುತ್ತದೆ. ಇದರಿಂದಾ ಮನುಷ್ಯನು ತನ್ನ ವಿವೇಚನಾಶಕ್ತಿಯನ್ನು ಕಳೆದು ಕೊಳ್ಳುತ್ತಾನೆ. ಅಲ್ಲದೆ, ಕುಡಿತವು ಪಿತ್ತಕೋಶದ ರೋಗ, ಹೃದ್ರೋಗ, ಕರುಳಿನ ಹುಣ್ಣು ಮೊದಲಾದವುಗಳಿಗೆ ಕಾರಣವಾಗುತ್ತದೆ. ಅದು ತೀವ್ರವಾದಾಗ ಸಾವಿಗೂ ಕಾರಣವಾಗಬಲ್ಲುದು.**

ಮದ್ಯಸಾರವು ಶರೀರದ ಎಲ್ಲಾ ಅಂಗಾಂಗಗಳ ಮೇಲೂ ತನ್ನ ಪ್ರಭಾವವನ್ನು ಬೀರುವುದಾದರೂ, ಮಿದುಳಿನ ಮೇಲೆ ಅದರ ಪ್ರಭಾವ ಅತಿ ಶೀಘ್ರ ಮತ್ತು ಪರಿಣಾಮಕಾರಿ. ಪ್ರಾಣಿ ವರ್ಗದ ವಿಕಾಸದಲ್ಲಿ ಮನುಷ್ಯನಿಗೆ ದೊರೆತ ವಿಶೇಷ ಕೊಡುಗೆಯೇ ಮಿದುಳು. ಅದರ ರಚನೆ ಮತ್ತು ಕಾರ್ಯನಿರ್ವಹಣೆ ಮಾನವನಲ್ಲಿ ಅತ್ಯಂತ ಶ್ರೇಷ್ಠ ಮಟ್ಟವನ್ನೇರಿದೆ. ಬುದ್ಧಿ ಕೌಶಲ್ಯದ ಪ್ರತಿಯೊಂದು ನಡೆವಳಿಕೆಯೂ ಅಲ್ಲಿಂದಲೇ ನಿರ್ವಹಿಸಲ್ಪಡುತ್ತದೆ. ಮದ್ಯಸಾರದ ಮೊದಲು ಪರಿಣಾಮಗಳು ಕಾಣಿಸಿಕೊಳ್ಳುವುದು. ಅತ್ಯಂತ ವಿಕಾಸಗೊಂಡ ಮಿದುಳಿನ ಅಣುಕೋಶಗಳ ಮೇಲೆ, ಅದರಿಂದಾಗುವ ಪ್ರಭಾವದಿಂದ ಹೀಗೆ ಜರುಗುವ ಕ್ರಿಯೆಗೆ ' ತೀವ್ರಗತಿಯ ಅಮಲೇರಿಕೆ ' ಯೆನ್ನಬಹುದು.

ರಕ್ತದಲ್ಲಿ ಅಲ್ಕೋಹಾಲ್‌ನ ಪ್ರಮಾಣ, ಒಂದು ಮಿಲಿಲೀಟರ್‌ನಲ್ಲಿ ಒಂದು ಮಿಲಿಗ್ರಾಂನ ಮಟ್ಟಕ್ಕೇರುತ್ತಿದ್ದಂತೆಯೇ, ಅಮಲೇರಿಕೆಯ ಮೊದಲ ಚಿಹ್ನೆಗಳು ಪ್ರಕಟವಾಗುತ್ತವೆ. ಯೋಚನಾಶಕ್ತಿ ಮತ್ತು ನಡೆವಳಿಕೆಗಳ ಹತೋಟಿಯ ಕೇಂದ್ರಗಳಿರುವ ಮಿದುಳಿನ ಮೇಲ್ಭಾಗ—ಕಾರ್ಟೆಕ್ಸ್‌ನ ಮೇಲೆ ಮೊದಲ ಪರಿಣಾಮ ಕಾಣಿಸಿಕೊಳ್ಳುತ್ತದೆ. ಆಲ್ಕೋಹಾಲ್ ಮೊದಲು ಈ ಭಾಗವು ಕೆರಳುವಂತೆ ಮಾಡಿ ನಂತರ ಶಮನಗೊಳಿಸುತ್ತದೆ. ಈ ಪರಿಣಾಮ ಗಳಿಂದ ವ್ಯಕ್ತಿಯು ತನ್ನ ವಿವೇಚನಾ ಶಕ್ತಿಯನ್ನು ಕಳೆದುಕೊಂಡು ಕುಡಿದ ಸ್ವಲ್ಪ ಸಮಯದಲ್ಲಿ ಉದ್ರೇಕಿತನಾದ

ವನಂತೆ ಕಾಣುತ್ತಾನೆ. ಮುಂದೆ ಮನಸ್ಸು ಹಗುರಾದಂತಾಗಿ ಹರ್ಷ ಚಿತ್ತನಾಗುತ್ತಾನೆ. ಶಮನಿಕ ಪ್ರಭಾವವು ಹೆಚ್ಚಾದಂತೆಲ್ಲಾ ಸಾಮಾನ್ಯ ನಡೆವಳಿಕೆಗಳ ಮೇಲಿನ ಹತೋಟಿ ಕಳಚುತ್ತದೆ. ಅಂತರ್ಮುಖಿಯಾದವರು ಬಹಿರ್ಮುಖಿಯಾಗುತ್ತಾರೆ. ಸಂಭಾಷಣೆ ಹಗುರವಾದ ಧಾಟಿಗಿಳಿಯುತ್ತದೆ. ಅಸಂಬದ್ಧ ವಾದಗಳು ಪ್ರಾರಂಭವಾಗುತ್ತವೆ. ಗಂಭೀರ ಪ್ರವೃತ್ತಿಯವರು ವಾಚಾಳಿಗಳಾಗುತ್ತಾರೆ. ಅಪರಿಚಿತರಲ್ಲೂ ಆತ್ಮೀಯತೆಯನ್ನು ಬೆಳೆಸಲು ಪ್ರಯತ್ನಿಸುತ್ತಾರೆ. ಕೆಲವರಲ್ಲಿ ಇದು ಲೈಂಗಿಕ ಪ್ರಚೋದನೆಗೂ ಎಡೆಮಾಡಿ, ಅಪವಾದಗಳಿಗೂ ಗುರಿಯಾಗಬಹುದು.

ಯುಕ್ತಾಯುಕ್ತಗಳ ಪರಿಜ್ಞಾನ ಮಸುಕಾಗುತ್ತದೆ. ತುಲನಾತ್ಮಕ ಸಮನ್ವಯದ ಲೆಕ್ಕಾಚಾರ ಸಾಧ್ಯವಾಗುವುದಿಲ್ಲ. ಪ್ರಕ್ರಿಯಾತ್ಮಕ ಸಮತೋಲಿನ ಕಡಿಮೆಯಾಗಿ, ಚಾಕಚಕ್ಯತೆ ಮತ್ತು ಕೌಶಲ್ಯದಿಂದ ಮಾಡಬೇಕಾದ ಕಾರ್ಯದಕ್ಷತೆ ಕುಗ್ಗುತ್ತದೆ. ಕುಡಿದ ವಾಹನ ಚಾಲಕರು ಅಪಘಾತಗಳಿಗೆ ಕಾರಣರಾಗುವುದು ಈ ಮಟ್ಟಕ್ಕೆ ಬಂದಾಗಲೇ. ಮುಂದೆ ಮಾತಿನಲ್ಲಿ ತೊದಲು ಪ್ರಾರಂಭವಾಗುತ್ತದೆ. ಚಲನವಲನಗಳಲ್ಲಿ ಸಮನ್ವಯತೆ ತಪ್ಪಿ, ನಡಿಗೆಯಲ್ಲಿ ಅಸ್ಥಿರತೆಯುಂಟಾಗುತ್ತದೆ. ಎದ್ದು ನಿಂತುಕೊಳ್ಳುವುದಕ್ಕೂ ಕಷ್ಟವಾಗಬಹುದು. ಮನಸ್ಸಿನಲ್ಲಿ ಭ್ರಾಂತಿಯಾಗಿ ತಾವೇನು ಮಾಡುತ್ತೇವೆನ್ನುವುದರ ಪರಿಜ್ಞಾನವೂ ಇರುವುದಿಲ್ಲ. ಈ ಮಟ್ಟಕ್ಕೆ ಬಂದವರು ತಮ್ಮ ರಕ್ಷಣೆ ಮಾಡಿಕೊಳ್ಳಲೂ ಅಸಮರ್ಥರಾಗುತ್ತಾರೆ.

ಆಲ್ಕೋಹಾಲ್ ಪ್ರಮಾಣ ರಕ್ತದಲ್ಲಿ ಎರಡು ಮಿಲಿಗ್ರಾಂ ( ಒಂದು ಮಿಲಿ ಲೀಟರ್‌ನಲ್ಲಿ ) ಗಿಂತ ಜಾಸ್ತಿ ಏರುತ್ತಾ ಹೋದಂತೆಲ್ಲಾ, ಅದರ ಶಮನಿಕ ಕಾರ್ಯ ಮೆದುಳಿನ ಒಳಭಾಗದ ಕೇಂದ್ರಗಳ ಮೇಲೆ ಹೆಚ್ಚಾಗುತ್ತದೆ. ಈ ಮಟ್ಟಕ್ಕೆ ಬಂದವರು ಮಂಕು ಹಿಡಿದವರಂತೆ ಆಗುತ್ತಾರೆ. ಸ್ವಲ್ಪ ಹೊತ್ತಿಗೆ ನಿದ್ರೆ ಅವರನ್ನು ಆವರಿಸ ಬಹುದು. ಪ್ರಮಾಣ ಮೂರು ಮಿಲಿಗ್ರಾಂಗಿಂತ ಜಾಸ್ತಿಯಾದಲ್ಲಿ ಪ್ರಜ್ಞೆ ಹೋಗಿ, ಮೂರ್ಚಾವಂತರಾಗುತ್ತಾರೆ. ಇಂತಹವರನ್ನ ಆಸ್ಪತ್ರೆಗೆ ಸೇರಿಸಿ ಸರಿಯಾದ ಸುಶ್ರೂಷೆ ನಡೆಸಿದರೆ ಹಿಂದನ ಸ್ಥಿತಿಗೆ ಮರಳಿಸಲು ಸಾಧ್ಯ. ಮೂರ್ಚಿತನಾದವನು ಯಾರ ಗಮನಕ್ಕೂ ಬೀಳದೆ, ಬೀದಿಯಲ್ಲೋ ಅಥವಾ ಇನ್ನಾವುದೋ ಅಜ್ಞಾತ ಪ್ರದೇಶದಲ್ಲಿ ಬಿದ್ದುಕೊಂಡಿದ್ದು, ಆಲ್ಕೋಹಾಲ್ ಮಟ್ಟ ನಾಲ್ಕು ಮಿಲಿಗ್ರಾಂಗಿಂತ ಮೇಲೇರಿದರೆ, ಅಂತಹವರು ಸಾಯುವುದು ಖಂಡಿತವೆನ್ನಬಹುದು.

ಮದ್ಯಪಾನದಿಂದ ಪ್ರಜ್ಞಾಹೀನರಾಗಿ, ಈ ವಿಷಯದ ಸುದ್ದಿ ಕೊಡುವರಾರೂ ಇಲ್ಲದೆ ಆಸ್ಪತ್ರೆಗೆ ಸೇರಿದವರು ಸಮಸ್ಯೆಯಾಗುತ್ತಾರೆ. ಅಮಲೇರಿದಾಗ ಅವರು

ದ್ದ ತಲೆಗೋ, ಕೈ ಕಾಲುಗಳಿಗೋ ಗಾಯಗಳಾಗುವ ಸಾಧ್ಯತೆಗಳಿರುತ್ತವೆ. ಮಿದು
ಏಟಾಗಿ ಮೂರ್ಛೆಯಾದವರೂ ಸಹ ಇಂತಹದೇ ಚಿಹ್ನೆಗಳಿಂದ ಆಸ್ಪತ್ರೆಗೆ
ರುವ ಸಾಧ್ಯತೆ ಇರುವುದರಿಂದ ರೋಗಿಯ ಬಗ್ಗೆ ಸರಿಯಾದ ಮಾಹಿತಿ ಕೊಡು
ರೂ ಇಲ್ಲವಾಗುತ್ತಾರೆ. ಸ್ವಲ್ಪ ಕುಡಿದು, ತಲೆಗೆ ಬಿದ್ದ ಏಟಿನಿಂದಲೇ ಪ್ರಜ್ಞಾಹೀ
ದವರೂ ಸಹ ವೈದ್ಯರಲ್ಲಿ ವ್ಯತಿರಿಕ್ತವಾದ ಭಾವನೆಯನ್ನುಂಟುಮಾಡಿ, ಕುಡಿ
ಕಡೆ ಅವರ ಗಮನ ಹರಿದು, ತಲೆಯ ಏಟಿಗೆ ಸರಿಯಾದ ಚಿಕಿತ್ಸೆದೊರೆಯದೆ
ಯುವ ಸಾಧ್ಯತೆಗಳೂ ಇವೆ. ಕುಡಿದು ಅಮಲೇರಿದವರು ಸಾಯುವ ಇನ್ನೊಂದು
ವೆಂದರೆ, ಅಮಲಿನಿಂದ, ಸ್ವಲ್ಪ ಪ್ರಮಾಣದ ನೀರಿರಬಹುದಾದ ಚರಂಡಿ
ವಾ ಹೊಂಡಗಳಲ್ಲಿ ಮುಖವನ್ನು ಕೆಳಗೆ ಮಾಡಿ ಬಿದ್ದು, ಮೂಗು ನೀರಿನಲ್ಲಿ
ಲ್ಪ ಕಾಲ ಮುಳಗುವಂತಾದರೆ ಸಾಕು. ಅಮಲಿನ ಪ್ರಭಾವದಿಂದ ಅವರು
ಲೆದ್ದು ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕೂ ಅಸಮರ್ಥರಾಗಿರುತ್ತಾರೆ. ಈ ಎಲ್ಲಾ
ಣಾಮಗಳನ್ನು ಗಮನಿಸಿದರೆ, "ಆರಂಭದಲ್ಲಿ ಕುಡಿಯುವವನು ಮದ್ಯಸಾರವನ್ನು
ಯಸಿ ಕುಡಿಯುತ್ತಾನೆ. ನಂತರ ಮದ್ಯಸಾರವೇ ಮದ್ಯಸಾರವನ್ನು ಬಯಸಿ
ಡಿಸುತ್ತದೆ. ಮುಂದೆ ಕುಡಿಸುತ್ತವೇ ಅವನನ್ನು ಮುಗಿಸುತ್ತದೆ" ಎಂಬ ಜಪಾನಿನ
ನಪ್ರಿಯ ಹೇಳಿಕೆ ಸತ್ಯವೆನಿಸುತ್ತದೆ.

### ಕುಡಿತದ ಮರುದಿನದ ಪರಿಣಾಮ

ಮದ್ಯಸಾರವು ರಕ್ತದಲ್ಲಿರುವ ಸಮಯದಲ್ಲಿ ನಡೆಸುವ ಪರಿಣಾಮಗಳನ್ನು
ೇಲೆ ತಿಳಿದೆವು. ಅದು ರಕ್ತದಿಂದ ಹೊರಹೋದ ಮೇಲೂ ಕುಡಿದವರು ಅದರ
ಷ್ಪರಿಣಾಮಗಳಿಗೆ ಹೊರತಾಗವುದಿಲ್ಲ. ಬಹಳ ಮಂದಿಗೆ ಕುಡಿದ ಮರುದಿನ
ಹಳ ಹಿಂಸೆಯಾಗುತ್ತದೆ. ಆಗ ಸಂಭವಿಸುವ ಚಿಹ್ನೆಗಳಿಗೆಲ್ಲಾ 'ಹ್ಯಾಂಗೋವರ್'
ನ್ನುತ್ತಾರೆ. ಬೆಳಗ್ಗೆ ಏಳುತ್ತಲೆ ವಿಪರೀತ ತಲೆಸಿಡಿತ ಮತ್ತು ಹೊಟ್ಟೆ ಬಾಧೆ ಅನು
ವಿಸುತ್ತಾರೆ. ಕುಡಿತದ ಜೊತೆಯಲ್ಲಿ ಹೊಗೆಬತ್ತಿದ ಸೇದುವ ಅಭ್ಯಾಸವಿರುವವರಿ
ಂತೂ ಈ ಚಿಹ್ನೆಗಳು ಪ್ರಬಲವಾಗಿರುತ್ತವೆ. ಅಂತಹವರು ಬೆಳಗಿನಿಂದಲೇ ಮಂಕು
ಂತಿಗಳಾಗಿರುತ್ತಾರೆ; ಯಾವಕೆಲಸದಲ್ಲೂ 'ಏಕಾಗ್ರತೆ' ಇರುವುದಿಲ್ಲ. ಸಣ್ಣ ಸಣ್ಣ
ಷಯಗಳಿಗೂ ಪದೇ ಪದೇ ಸಿಡುಕುತ್ತಾರೆ. ಮನಸ್ಸಿನಲ್ಲಿ ಕಳಂಕ ಭಾವನೆಯಿಂದ
ರಿತಪಿಸುತ್ತಾರೆ.

ಜಠರದ ಒಳಪೊರೆಯಗಳನ್ನು ಹೆಚ್ಚು ಪ್ರಮಾಣ ಮದ್ಯಪಾನೀಯ
ರಳುವಂತೆ ಮಾಡಿ ಹೊಟ್ಟೆನೋವು ವಾಕರಿಕೆ ಅಥವಾ ವಾಂತಿಯೇ ಆಗುವಂತೆ
ಮಾಡುತ್ತವೆ. ಆ ಸಮಯದಲ್ಲಿ ಹಸಿವು ಕಡಿಮೆಯಾದಂತಿದ್ದರೂ ಅವು ಕಡಿಮೆ
ಯಾದ ಮೇಲೆ ವಿಪರೀತ ಹಸಿವುಂಟಾಗುತ್ತದೆ.

ಮಿಕ್ಕೆಲ್ಲ ಚಿಹ್ನೆಗಳಿಗಿಂತ, ತಲೆನೋವು ಬಹಳ ಜನಗಳಲ್ಲಿ ಕಾಣಿಸಿಕೊಳ್ಳುತ್ತದೆ. ಮಾನಸಿಕ ಕಾರಣಗಳು ಇದಕ್ಕೆ ಮೂಲವೆನ್ನಬಹುದಾದರೂ ಲಿವರ್‌ನಲ್ಲಿ ಆಲ್ಕೋಹಾಲಿನ ವಿಷಕಾರಕ ವಸ್ತುಗಳ ಸಂಪೂರ್ಣವಾಗಿ ತಲೆನೋವಿಗೆ ನಾಶವಾಗದೆ ಅವು ಮೆದುಳಿನಲ್ಲುಂಟುಮಾಡುವ ಪರಿಣಾಮವೇ ಕಾರಣವೆನ್ನಬದುದು.

ಕುಡಿದ ಸಮಯದಲ್ಲಿ ವ್ಯಕ್ತಿಯ ಅನಾವಶ್ಯಕ ಕಾರ್ಯಚಟುವಟಿಕೆಗಳಿಂದ ಶಕ್ತಿಯು ವ್ಯಯವಾಗಿರುತ್ತದೆ. ರಕ್ತನಾಳಗಳ ಹಿಗ್ಗುವಿಕೆಯಿಂದ ಶಾಖವೂ ಶರೀರದಿಂದ ಅತಿಯಾಗಿ ಹೊರ ಹೋಗಿರುತ್ತದೆ. ಇವೆಲ್ಲದರಿಂದ ಕುಡಿದವನಿಗೆ ಮರುದಿನ ಬಹಳ ದಣಿವಾದಂತೆ ಭಾಸವಾಗುತ್ತದೆ.

ವಿಪರೀತ ಕುಡಿದು, ಹಿಂದಿನ ದಿನ ಮಬ್ಬಿನಲ್ಲಿದ್ದ ಅನೇಕರಿಗೆ ಮರುದಿನ ಸರಿಯಾಗಿ ನಿದ್ದೆ ಮಾಡಲಾಗುವುದಿಲ್ಲ. ವಿಪರೀತ ಮೈ ಬೆವರುವುದು, ಹೆಚ್ಚಿನ ಹೃದಯದ ಬಡಿತ, ಮಾನಸಿಕ ಆಂತಂಕಗಳೂ ಸಹ ಅವರನ್ನು ಬಾಧಿಸುತ್ತವೆ.

ವಿಪರೀತ ಬಾಯಾರಿಕೆಯೂ ಹ್ಯಾಂಗೋವರ್ ಕಾಲದಲ್ಲಿ ಕಾಣಿಸಿಕೊಳ್ಳುವ ಇನ್ನೊಂದು ಪ್ರಮುಖಚಿಹ್ನೆ. ಶರೀರದ ಅಣುಕೋಶದಲ್ಲಿನ ನೀರಿನ ಅಂಶವು ಆಲ್ಕೋಹಾಲಿನ ದುಷ್ಪರಿಣಾಮದಿಂದ ಹೊರಬಹುದು. ಅಣುಕೋಶಗಳು ಒಣಗಿದಂತಾಗಿ, ದಾಹ ಹೆಚ್ಚಾಗುತ್ತದೆ. ಇತರ ದುಷ್ಟ ಪರಿಣಾಮಗಳು ಕಡಿಮೆಯಾದಂತೆ ಕ್ರಮೇಣ ಬಾಯಾರಿಕೆಯೂ ಕಡಿಮೆಯಾಗುತ್ತದೆ.

ಅತಿ ಹೆಚ್ಚಾಗಿ ಕುಡಿದವರಿಗೆ ಹ್ಯಾಂಗೋವರ್ ಸಮಯದಲ್ಲಿ ಸುಪ್ತವಾಗಿದ್ದ ಹಲವು ಕಾಯಿಲೆಗಳು ವಿಪರೀತಕ್ಕೇರಬಹುದು. ಮುಖ್ಯವಾಗಿ ಲಿವರ್‌ನ ಕಾಯಿಲೆಗಳು, ಹೃದ್ರೋಗಗಳು. ಜಠರದ ಹುಣ್ಣು ಇತ್ಯಾದಿ ಉಲ್ಬಣಗೊಂಡು. ರೋಗಿಯು ಸಾವಿಗೂ ಈಡಾಗಬಹುದು. ಆಲ್ಕೋಹಾಲ್ ನೇರವಾಗಿ ಈ ಅಂಗಗಳ ಮೇಲೆ ದುಷ್ಪರಿಣಾಮವನ್ನುಂಟು ಮಾಡುವುದಲ್ಲದೆ, ಮಾನಸಿಕ ಒತ್ತಡವು ಬಹುಮಟ್ಟಿಗೆ ಕಾರಣವಾಗುತ್ತದೆ.

ಕುಡಿದಾಗಿನ ಮರೆವು ( ಬ್ಲಾಕ್ ಔಟ್ )

ಕೆಲವರಿಗೆ ಕುಡಿದಾಗ ತಾವು ಏನು ಮಾತನಾಡುತ್ತಿದ್ದರೂ ಅಥವಾ ಯಾವ ಕಾರ್ಯವೆಸಗಿದ್ದರೆಂಬುದರ ಸಂಪೂರ್ಣ ಅರಿವು ಮಾಯವಾಗಿರುತ್ತದೆ. ಕುಡಿದಸಮಯದಲ್ಲಿ, ಅವರು ಯಥಾಸ್ಥಿತಿಯಲ್ಲೇ ಇದ್ದರೂ ಅವರಿಗೆ ಜ್ಞಾಪಕ ಉಳಿದಿರುವುದಿಲ್ಲ.

ತಿ ಹೆಚ್ಚಾಗಿ ಕುಡಿಯುವವರಲ್ಲಿ ಈ ಚಿಹ್ನೆ ಕಾಣಿಸಿಕೊಳ್ಳುವುದಾದರೂ, ಮಿತ ಾಗಿ ಕುಡಿಯುವವರೂ ಇದರಿಂದ ತಪ್ಪಿಸಿ ಕೊಂಡಂತಿಲ್ಲ. ಇಂತಹವರನ್ನು ಕುಡಿದ ಮಯದಲ್ಲಿ. ನ್ಯಾಯಪತ್ರಗಳಿಗೆ ( ಲೀಗಲ್ ಡಾಕ್ಯುಮೆಂಟ್ಸ್ ) ರುಜು ಮಾಡಿಸಿ ರುಪಯೋಗ ಪಡಿಸಿಕೊಂಡು ಪೇಚಿಗೆ ಸಿಕ್ಕಿಸಿದ ಪ್ರಸಂಗಗಳೂ ಹಲವು ಇವೆ.

**ೇರೂರಿದ ಮದ್ಯಸಾರತೆ ( ಕ್ರಾನಿಕ್ ಅಲ್ಕೋಹಾಲಿಸಮ್ )**

ಮದ್ಯಪಾನದ ಅಭ್ಯಾಸ, ಹೆಚ್ಚಿನ ಜನರಲ್ಲಿ ಯಾವುದೋ ಅನಿವಾರ್ಯ ಅಥವಾ ಸಾಮಾಜಿಕ ಪ್ರತಿಷ್ಠೆಯ ಒತ್ತಡದಿಂದ ಒಂದು ಹವ್ಯಾಸವಾಗಿ ಆರಂಭ ಾಗಿ ಖಾಯಂ ಅಭ್ಯಾಸವಾಗುತ್ತದೆ. ಕೆಲವರಲ್ಲಿ ಹೀಗಾಗುವುದಕ್ಕೆ ಈ ಮೊದಲೇ ನಮೂದಿಸಿದಂತೆ ವ್ಯಕ್ತಿಯು ಸಾಮಾಜಿಕ, ಸಾಂಸ್ಕೃತಿಕ, ಅನುವಂಶಿಕ ಹಿನ್ನೆಲೆ, ಮಾನಸಿಕ ದೃಷ್ಟಿಕೋನ ಅಥವಾ ಅದು ಅವನಲ್ಲುಂಟು ಮಾಡುವ ಹಿತಕರ ಭಾವನೇ ಇವುಗಳು ಕಾರಣವಾಗಬಹುದು. ಕುಡಿಯುವ ಅಭ್ಯಾಸಕ್ಕೆ ಇಳಿದವನು ಕ್ರಮೇಣ ಪ್ರತಿದಿನವೂ ಕಡಿಯದೇ ಇರಲು ಸಾಧ್ಯವಾಗುವುದಿಲ್ಲ. ಮಾನಸಿಕ ತೃಪ್ತಿ ದೊರೆ ಯಲು ಮೊದಲಿಗಿಂತ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಮದ್ಯಪಾನೀಯಗಳನ್ನು ಸೇವಿಸ ಬೇಕಾಗುತ್ತದೆ. ಕುಡಿತದ ಮೇಲಿದ್ದ ಹತೋಟಿ ಕ್ರಮೇಣ ಅವನಿಂದ ತಪ್ಪಿ ಹೋಗುತ್ತದೆ. ಮುಂದೆ ಕಾಲ, ಸಮಯ, ಪರಿಸರದ ಪ್ರಜ್ಞೆಯಿಲ್ಲದೆ ದಿನವಿಡೀ ಕುಡಿ ಯುವುದರಲ್ಲಿ ಮಗ್ನನಾಗುತ್ತಾನೆ. ಕುಡಿಯುವುದನ್ನು ನಿಲ್ಲಿಸಿದರೆ ಸಹಿಸಲಾರದ ರೋಗರುಜಿನಗಳ ಚಿಹ್ನೆಗಳ ಸರಮಾಲೆ ಗಳೇ ಶುರುವಾಗಿ ಅವನು ಕುಡಿತದ ದಾಸಾ ನುದಾಸನಾಗಿ ತನ್ನ ಆರೋಗ್ಯವನ್ನು ಕೆಡಿಸಿಕೊಂಡು ತನ್ನ ಕುಟುಂಬವನ್ನು ಕಷ್ಟ ಕಾರ್ಪಣ್ಯಗಳ ಮಡುವಿನಲ್ಲಿ ಮುಳುಗಿಸಿ ಸಮಾಜಕ್ಕೂ ಹೊರೆಯಾಗುತ್ತಾನೆ.

ಮದ್ಯಸಾರತೆ ಯಾರಲ್ಲಿ ಬೇರೂರಿದೆ ಎಂಬುದನ್ನು ಸುಲಭದಲ್ಲಿ ನಿರ್ಧರಿಸು ವುದು ಕಷ್ಟದ ಕೆಲಸ. ಅದು ಆ ಮಟ್ಟಕ್ಕೆ ಬರಲು ಹಲವು ಮಜಲುಗಳಿವೆ. ವ್ಯಕ್ತಿ ಯಲ್ಲಾಗುವ ಮಾನಸಿಕ ದೈಹಿಕ ನಡೆವಳಿಕೆಗಳ ಬದಲಾವಣೆಗಳನ್ನು ಬಹಳ ಹತ್ತಿರ ದಿಂದ ವೀಕ್ಷಿಸುವವರಿಗೆ ಈ ಮಜಲುಗಳನ್ನು ಗುರುತಿಸುವುದು ಅಸಾಧ್ಯವಾಗಲಾ ರದು. ಸರ್ವೇಸಾಮಾನ್ಯವಾಗಿ ಕುಡಿಯುವ ಅಭ್ಯಾಸವಿರುವ ಇಂತಹವರು, ಖಾಸಗಿ ಅಥವಾ ಸಾರ್ವಜನಿಕ ಸಮಾರಂಭಗಳಲ್ಲಿ ಮದ್ಯಪಾನೀಯಗಳು ದೊರೆಯುವ ಅವ ಕಾಶವಿದ್ದಲ್ಲಿ ಯಾರ ಸಾಂಪ್ರದಾಯಿಕ ಕೋರಿಕೆ ಅಥವಾ ಒತ್ತಾಸೆಯೂ ಇಲ್ಲದೆ ಕುಡಿಯುವುದಕ್ಕೆ ಹಿಂಜರಿಯುವುದಿಲ್ಲ.

**ದುರಾಸೆ**

ಕುಡಿಯುವಾಗ ಅದರ ಪ್ರಮಾಣ ಮತ್ತು ವೇಗದ ಕಡೆ ಗಮನವಿಡದೆ ಕುಡಿಯುತ್ತಾರೆ, ಇಂತಹವರು ಈ ಗಾಗಲೇ ಖಾಸಗಿಯಾಗಿ ಪ್ರತಿದಿನ ಕುಡಿಯು

ತ್ತಿದ್ದು, ಅದರ ಪ್ರಮಾಣ ಏರುತ್ತಲೇ ಇರುತ್ತದೆ. ಈ ಸ್ಥಿತಿ ಬಹಳ ದಿನಗ ಳಿಂದಿದ್ದು ಅವರ ಮಿದುಳು ಹೆಚ್ಚು ಪ್ರಮಾಣದ ಆಲ್ಕೋಹಾಲ್‌ನ ಮಟ್ಟಕ್ಕೆ ಹೊಂದಿಕೊಳ್ಳುತ್ತಾ ಇರುತ್ತದೆ. ಕುಡಿಯುವವರಿಗೆ ತಾವು ಕುಡಿಯುವ ಆಲ್ಕೋಹಾ ಲ್‌ನ ಪ್ರಮಾಣಕ್ಕೆ ಒಂದು ತರಹದ ಹೆಮ್ಮೆಯೂ ಇರುತ್ತದೆ.

ಮುಂದೆ ಕೆಲವು ತಿಂಗಳು ಅಥವಾ ವರ್ಷಗಳು ಇದೇ ರೀತಿ ಮುಂದುವರಿ ದಲ್ಲಿ ಕುಡಿದಾಗಿನ ಮರೆವುತನ ಹೆಚ್ಚಾಗುತ್ತಾ ಬರುತ್ತವೆ. ಇದು ಮದ್ಯಪಾನದ ಗೀಳು ಅವನಲ್ಲಿ ಬಲವಾಗಿ ಬೇರೂರಿದ್ದಕ್ಕೆ ಒಂದು ಮೈಲುಗಲ್ಲು. ಈಗ ಮದ್ಯ ಪಾನ ಬರೀ ಮಾನಸಿಕ ಉಪಶಮನದ ದಾರಿ ಮಾತ್ರವಲ್ಲದೆ ಅದಿಲ್ಲದೆ ಅವನ ಪಥ ಮುಂದುವರಿಯುವುದಿಲ್ಲ. ಮೊದಲಿನ ಸಾಮಾಜಿಕ ಕುಡಿತ, ಈಗ ಅವನಿಗೆ ತೀರ ಕಡಿಮೆ ದರ್ಜೆ ಎನಿಸುತ್ತದೆ. ಸಾರ್ವಜನಿಕ ಸಮಾರಂಭಗಳಲ್ಲಿ ಇನ್ನೆಲ್ಲರಿಗಿಂತ ಜಾಸ್ತಿ ಮದ್ಯ ಪಾನೀಯಗಳನ್ನು ಗಿಟ್ಟಿಸಿಕೊಳ್ಳಲು ಒಂದಲ್ಲ ಒಂದು ಉಪಾಯ ಮಾಡುತ್ತಿ ರುತ್ತಾನೆ. ಹಲವಾರು ಗುಂಪುಗಳಲ್ಲಿ ಬೆರೆತು ಎಲ್ಲ ಕಡೆಗಳಲ್ಲೂ ಜಾಸ್ತಿ ಪಾನೀಯ ದೊರಕಿಸಿಕೊಳ್ಳುತ್ತಾನೆ. ಇಂತಹ ಸಮಾರಂಭಗಳಿಗೆ ಹೋಗುವ ಮೊದಲು ಅಲ್ಲಿ ದೊರೆಯಬಹುದಾದ ಮದ್ಯಪಾನೀಯದ ಪ್ರಮಾಣವನ್ನು ಯೋಚಿಸಿ ಕಡಿಮೆ ಸಿಗು ವಂತಿದ್ದರೆ, ಮನೆಯಲ್ಲೇ ಸಾಕಷ್ಟು ಕುಡಿದು ಮತ್ತೆ ಸಮಾರಂಭಕ್ಕೆ ಹೋಗು ತ್ತಾನೆ. ಈ ತರಹದ ನಡೆವಳಿಕೆಯೂ 4-5 ವರ್ಷಗಳವರೆಗೂ ಮುಂದುವರಿಯ ಬಹುದು.

ಕುಡಿತದ ಮೇಲಿನ ಹತೋಟಿ ತಪ್ಪುವುದು ಮುಂದಿನ ಮೈಲುಗಲ್ಲು. ಕುಡಿ ಯುವುದಕ್ಕೆ ಶುರುಮಾಡಿದವರು ಮುಂದೆ ಹಲವಾರು ಗಂಟೆಗಳು ಅಮಲೇರಿದವರಂತೆ ಇರುತ್ತಾರೆ ಇನ್ನು ಕೆಲವರು ಬಹಳ ಸುಸ್ತಾಗಿ ಕುಡಿಯಲೂ ಅಸಾಧ್ಯವಾಗುವ ಪರಿಸ್ಥಿತಿ ಯಲ್ಲಿರುತ್ತಾರೆ. ಅವರು ಇಂತಹ ಪ್ರಸಂಗಗಳಿಗೆ ಹಲವಾರು ಬಾರಿ ತುತ್ತಾಗಿರು ತಾರೆ. ಈ ಪ್ರಸಂಗಗಳ ಅವಧಿಯಲ್ಲಿ ಮಂಕು ಹಿಡಿದವರಂತೆ ಯೋಚಿಸುತ್ತಾರೆ. ಆದರೂ ಮತ್ತೆ ಕುಡಿದು ಅಮಲೇರಿಸುವುದಕ್ಕೆ ಅವಕಾಶಗಳನ್ನೇ ಕಲ್ಪಿಸುವುದರಲ್ಲಿ ಮಗ್ನರಾಗಿರುತ್ತಾರೆ. ಕುಡಿತದ ಹತೋಟಿ ತಮಗೆ ತಪ್ಪಿಲ್ಲವೆಂಬ ತಪ್ಪು ಕಲ್ಪ ನೆಯೂ ಅವರಲ್ಲಿದ್ದು, ತಾವು ಕುಡಿಯಬೇಕೆಂಬುದರ ಬಗೆ ಇತರರೊಡನೆ ವಾದಿ ಸುವುದಕ್ಕೂ ಹಿಂಜರಿಯುವುದಿಲ್ಲ. ಅವನ ಮನೆಯವರು, ಹೆಂಡತಿ ಮತ್ತಿತರರಿಗೆ ಅವನ ನಡೆವಳಿಕೆಗಳಲ್ಲಿನ ಬದಲಾವಣೆಗಳು ಎದ್ದು ಕಾಣುತ್ತಿದ್ದು, ಕುಡಿತದ ಬಗ್ಗೆ ಆಕ್ಷೇಪಣೆ ಎತ್ತಿ, ಅವನನ್ನು ದಾರಿಗೆ ತರಲು ಪ್ರಯತ್ನಿಸುತ್ತಾರೆ. ಅವನ ಕೆಲಸ ಕಾರ್ಯಗಳಲ್ಲೂ ಬದಲಾವಣೆ ಕಾಣಿಸುತ್ತಿದ್ದು ಕೆಲಸದ ಯಜಮಾನರೂ ಸಹಾ, ಕುಡಿತದ ಬಗ್ಗೆ ಎಚ್ಚರಿಕೆ ನೀಡಲು ಪ್ರಾರಂಭಿಸುತ್ತಾರೆ.

ಆದರೆ ಕುಡಿತದಲ್ಲಿ ಈ ಮಟ್ಟಕ್ಕೆ ಬಂದವರಿಗೆ ಬುದ್ಧಿವಾದ, ಎಚ್ಚರಿಕೆಗಳನ್ನು ಅರ್ಥಮಾಡಿ ಕೊಳ್ಳುವಷ್ಟು ಸ್ಥೈರ್ಯವಿರುವುದಿಲ್ಲ. ತಾವು ಕುಡಿಯುವುದು ಜಾಸ್ತಿ ಯೇನೂ ಅಲ್ಲ. ತನ್ನಂತಹ ಶ್ರೇಷ್ಠ ವ್ಯಕ್ತಿಯೇ ಇಲ್ಲವೆಂಬ ಪೊಳ್ಳು ಗಾಂಬೀರ್ಯ ದಿಂದ ಮೆರೆಯುತ್ತಾರೆ. ಹೆಚ್ಚು ಹೆಚ್ಚು ಕುಡಿಯುವುದಕ್ಕೆ ಬೇಕಾಗುವ ಹಣವನ್ನು ಸಂಪಾದಿಸಲು, ಜೂಜು ಕೋರತನ, ಸಾಲಗಾರಿಕೆ, ಕದಿಯುವುದು ಮುಂತಾದ ದುರ್ವ್ಯವಹಾರಕ್ಕೆ ಇಳಿಯುತ್ತಾನೆ. ಸಂಸಾರದ ಆಗುಹೋಗುಗಳ ಬಗ್ಗೆ ಆಸಕ್ತಿಯೇ ಇರುವುದಿಲ್ಲ. ಸಮಾಜದಲ್ಲಿ ಇತರರು ಇವನಿಂದ ದೂರವಿರಲು ಪ್ರಯತ್ನಿಸುತ್ತಾರೆ. ಅವನ ಸಂಸಾರದವರೂ ಸಹಾ ನೆರೆಹೊರೆಯವರ ಕುಚೋದ್ಯ ಮತ್ತು ನಿರ್ಲಕ್ಷ್ಯ ಕ್ಕೆಗೆ ಒಳಗಾಗಿ–ಆರ್ಥಿಕ ಸಮಸ್ಯೆಗಳ ಜೊತೆಗೆ ಮಾನಸಿಕ ಯಾತನೆಗೊಳಗಾಗು ತ್ತಾರೆ. ಕುಡುಕನು ಬರುಬರುತ್ತಾ ತನ್ನ ಅಧೋಗತಿಗೆ ತನ್ನ ಸಂಸಾರದವರು ಮತ್ತು ಸಮಾಜವೇ ಕಾರಣವೆಂದು ಎಲ್ಲರನ್ನೂ ದೂಷಿಸಲು ಆರಂಭಿಸುತ್ತಾನೆ. ತನ್ನ ಹೆಂಡತಿ ಮಕ್ಕಳ ಮೇಲೆ ಸೇಡು ತೀರಿಸಿಕೊಳ್ಳುವ ನೆಪದಿಂದ ಅವರನ್ನೇ ಬೈಯು ವುದು. ಹೊಡೆಯುವುದು ಕೆಲವು ಸಾರಿ ಖೂನಿ ಮಾಡುವುದಕ್ಕೂ ಹೇಸುವುದಿಲ್ಲ. ಕುಡಿತದಿಂದ ಆರೋಗ್ಯವನ್ನು ಕೆಡಿಸಿಕೊಂಡು ಲೈಂಗಿಕ ಶಕ್ತಿಯನ್ನು ಕಳೆದುಕೊಂಡು ಅವನ ಹೆಂಡತಿಯ ಶೀಲದ ಬಗ್ಗೆ ಅನುಮಾನ ಪ್ರವೃತ್ತಿ ಹೊಂದಿದ್ದು ಅವಳಿಗೆ ಚಿತ್ರಹಿಂಸೆ ಕೊಡಲು ಪ್ರಾರಂಭಿಸುತ್ತಾನೆ. ಅಂತೂ ಅವನ ಸಂಸಾರ ಜೀವನ ನರಕಮಯವಾಗುತ್ತದೆ.

ಮುಂದೆ ದೈಹಿಕ ಮತ್ತು ಮಾನಸಿಕ ಆರೋಗ್ಯ ಪೂರ್ತಿನಾಶವಾಗಿ ನಿಶ್ಯಕ್ತಿ ಯಿಂದ ಕೈ ಕಾಲುಗಳಲ್ಲಿ ನಡುಕ ಶುರುವಾಗುತ್ತದೆ. ಬೆಳಿಗ್ಗೆ ಹಾಸಿಗೆಯಿಂದ ಏಳು ತ್ತಲೇ ಇವು ಕಾಣಿಸಿಕೊಂಡು, ತತ್‌ಕ್ಷಣ ಮದ್ಯಪಾನೀಯವನ್ನು ಸೇವಿಸದಿದ್ದರೆ, ನಡು ಕದಿಂದ ಎದ್ದು ನಿಂತು, ಬಟ್ಟೆ ಬರೆ ತೊಟ್ಟು ಕೊಳ್ಳಲೂ ಆಗುವುದಿಲ್ಲ. ಮದ್ಯ ಪಾನ ಮಾಡಿದ ಮೇಲೆ ನಡುಕ ಕಡಿಮೆಯಾಗುತ್ತದೆ. ಇಂತಹವರು ಈಗ ಹಗಲೂ ರಾತ್ರಿ, ವಾರದಲ್ಲಿ ಪ್ರತಿದಿನವೂ ಮದ್ಯಪಾನವಿಲ್ಲದೆ ಜೀವನ ಮಾಡುವಂತಿಲ್ಲ. ಯಾರ ಜೊತೆಗಾದರೂ, ಯಾವ ಪಾನೀಯವಾದರೂ ತನ್ನ ಸಾಮಾಜಿಕ ಅಂತಸ್ತು ಘನತೆ ಗೌರವಗಳ ಲಕ್ಷವಿಲ್ಲದೆ ಕುಡಿಯಲು ಹೇಸುವುದಿಲ್ಲ. ಆಹಾರ ಸೇವನೆಯೂ ಕಡಿಮೆಯಾಗಿ ಮದ್ಯಪಾನದಿಂದಾಗುವ ಹಲವಾರು ಕಾಯಿಲೆಗಳು ಅವನನ್ನು ಆವ ರಿಸಿರುತ್ತವೆ. ಈ ಘಟ್ಟದಲ್ಲಿ ಅವನು ಕುಡಿಯದಿದ್ದರೆ ವಿಚಿತ್ರ ಹಿಂಸೆಯನ್ನು ಅನು ಭವಿಸಬೇಕಾಗುತ್ತದೆ; ಆದರೆ ಕುಡಿತವೂ ಸಂಪೂರ್ಣ ಶಾಂತಿಯನ್ನು ಕೊಡುವುದಿಲ್ಲ. ಕುಡಿಯುವುದನ್ನು ಮುಂದುವರಿಸುವುದೂ ಬಹಳ ಕಷ್ಟ; ಆದರೆ ಕುಡಿಯದೇ ಇರು ವುದನ್ನೇ ಯೋಚಿಸುವಂತಿಲ್ಲ–ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ತೊಳಲಾಡು ವಂತಾಗುತ್ತಾನೆ.

( ಕೃಪೆ ಜನಪದ ಜುಲೈ 81 ರಿಂದ )



# ಕಾವ್ಯವಾಹಿನಿ

## ಗಂಟೆ

ಡಿ|| ಟಿ. ಎನ್. ಮಹಾದೇವಯ್ಯ

ಉಷೆಯು ಮುಂದಣ ನಡೆಯು ನಾಂದಿ ಗೀತೆಯು ನುಡಿದು
ಉಲಿವ ವಿಹಗಂಗಳಾ ಕೊರಲದನಿ ಸವಿ ಸುರಿದು
ಉದಯ ಗಿರಿ ಗುಡಿಯಲ್ಲಿ ಪೂಜೆಯಿದೊ ಬಾರೆಂದು
ಗಂಟೆ ಗಣಗಣನೆಂದು ಗಣಗಣಾ ಎನ್ನುತಿದೆ !

ಹೊಂದಳಿರ ಹೊಳಪೆಸೆದು ಕೆಂದಳಿರ ಕೆಂಪೆರಚಿ
ಮಲ್ಲಿಕಾಲತೆ ಸುರಿದು ಜಾಜಿ ಸಂಪಿಗೆ ಬೆರೆದು
ಬೊಗಸೆ ಹೂವನು ಹಿಡಿದು ಅರ್ಪಿತವೊ ನಿನಗೆಂದು
ಗಂಟೆ ಗಣಗಣನೆಂದು ಗಣಗಣಾ ಎನ್ನುತಿದೆ !

ಮರಿ ಮರೀಚಿಕೆ ಮಾಲೆ ಧೂಪ ದಾಘ್ರಾಣದಲಿ
ತರಣಿ ದೀಪದ ಕಾಂತಿ ಬೆಳ್ಮುಗಿಲ ಸಾಲಿನಲಿ
ಸೋನೆ ತುಂತುರು ಸುರಿವ ಸೇಸೆ ಮೌಕ್ತಿಕವೆರಚಿ
ಗಂಟೆ ಗಣಗಣನೆಂದು ಗಣಗಣಾ ಎನ್ನುತಿದೆ !

ಉರುಳಿ ಜಾರುವ ತೊರೆಯ ಕಲಕಲದ ನಾದದಲಿ
ತುಂಬಿ ಹೊರಳುವ ಹೊಳೆಯ ಅಲಸಿಕೆಯ ಭಾವದಲಿ
ಮಂತ್ರ ಪ್ರಾರ್ಥನೆ ನುಡಿವ ಸುಂದರ ಪ್ರಭಾತದಲಿ
ಗಂಟೆ ಗಣಗಣನೆಂದು ಗಣಗಣಾ ಎನ್ನುತಿದೆ !

# 'ಸ್ಫೂರ್ತಿ ಜ್ಯೋತಿ'

ೀನೂ ಹೇಳುದರವುಲ್ಲಾಗಲಿ, ಬರೆಯುವುದರಲ್ಲಾಗಲಿ, ಹುರುಳು ಇರಲಿ ಹೊಟ್ಟು ೇಡ.

—ಚಾರ್ಲ್ಸ್ ಬಕ್ಸಟನ್

ಗಗನಕ್ಕೆ ಚಂದ್ರಮನೇ ಶೃಂಗಾರ ನಾರಿಗೆ ಗುಣವೇ ಶೃಂಗಾರ

—ಬಸವಣ್ಣ

ಅನೇಕ ಕ್ಷುದ್ರ ದೇವತೆಗಳ ಬಗ್ಗೆ ಸಲ್ಲದ ಮೂಢ ನಂಬಿಕೆಗಳಿಗಿಂತ ನಾಸ್ತಿಕವಾದವೇ ಒಳ್ಳೆಯದು.

—ಬೇಕನ್

ಪಾಪಿಯಾದ ಧನಿಕ ಮೆರುಗು ಕೊಟ್ಟ ಮಣ್ಣು, ಭಕಿಯುಳ್ಳ ಬಡವ ಮಣ್ಣು ಮೆತ್ತಿದ ಹೊನ್ನು.

—ಸಾದಿ

ಅತಿ ದೀನನಿಗೆ ಆದ ಅಪಚಾರವು ಸಮಾಜಕ್ಕಾದ ಅಪಚಾರ ಎಂದು ಎಲ್ಲಿ ತಿಳಿಯುತ್ತಾರೋ ಅಲ್ಲಿ ಒಳ್ಳೆಯ ಸರಕಾರವಿದೆ.

—ಸಾಲನ್

ಕೆಲಸಕ್ಕೆ ಸಮಾನವಾದ ಬಂಧುವಿಲ್ಲ, ಕೆಲಸ ಮಾಡುತ್ತಿರುವವನು ಎಂದೂ ಕೆಡುವುದಿಲ್ಲ.

—ಅನುಭವವಾಣಿ

ಹಣವನ್ನು ಗಳಿಸುವುದು ಕಷ್ಟವಿದೆ. ನಂತರ ಅದನ್ನು ಕಾಯಬುವುದರಲ್ಲೂ ಕಷ್ಟವಿದೆ. ಅದು ಕಳೆದು ಹೋದರೂ ಕಷ್ಟ, ವೆಚ್ಚವಾದರೂ ಕಷ್ಟ. ಹೀಗೆ ಹಣವು ಎಲ್ಲ ದುಃಖಗಳ ತವರು ಮನೆಯಾಗಿದೆ.

—ಮಹಾಭಾರತ

ಜೀವಂತನಾದವನಿಗೆ ಸುಖವು ನೂರು ವರ್ಷ ಕಳೆದಾದರೂ ಸಿಕ್ಕಿಯೇ ಸಿಕ್ಕುತ್ತದೆ.

—ಶ್ರೀ ವಾಲ್ಮೀಕಿ

ತಮ್ಮನ್ನು ತಾವು ನಿಯಂತ್ರಿಸಿಕೊಳ್ಳ ಬಲ್ಲವರು ಮಾತ್ರ ಅನ್ಯರನ್ನು ನಿಯಂತ್ರಿಸ ಬಲ್ಲರು.

—ವಿಲಿಯಂಡಾಜ್ಲಿಟ್

( 9 ನೇ ಪುಟದಿಂದ )

ತೃಪ್ತರಾಗಿ ನರಗುರಿಗಳಂತೆ ಇರಬೇಕೋ? ಅಥವಾ ಆನೆಯ ಹಾಗೆ ರಸಜ್ಞರಾಗಿ ಅರ್ಥಪೂರ್ಣ ಬದುಕನ್ನು ನಡೆಸಬೇಕೋ ಎಂಬುದು ಪ್ರಶ್ನೆ. ನಾವು ಕುರಿಗಳಂತೆ ಬಾಳಿದರೆ ಬಾಳಿನ ಅನೇಕ ರಸಮಯ ಸನ್ನಿವೇಶಗಳಿಂದ, ಜೀವನ ಮೌಲ್ಯಗಳಿಂದ ವಂಚಿತರಾಗುತ್ತೇವೆ. ಬಾಳಿನ ರಸಸ್ಥಾನಗಳನ್ನು ಗುರುತಿಸಿ ಅವುಗಳನ್ನು ರಸಜ್ಞನಾಗಿ ಅನುಭವಿಸಿದರೆ ಬಾಳು ಸಾರ್ಥಕವಾಗುತ್ತದೆ. ಆದರೆ ಬಾಳಿನ ರಸಸ್ಥಾನಗಳನ್ನು ಕಂಡುಕೊಳ್ಳುವುದು ಹಾಗು ಅವುಗಳಲ್ಲಿ ಪಾಲ್ಗೊಂಡು ಅನುಭವಿಸುವುದು ಅಷ್ಟು ಸುಲಭವಲ್ಲ. ಅದಕ್ಕೆ ಸಹೃದಯತೆಬೇಕು. ಸದಭಿರುಚಿ ಬೇಕು. ರಸಗ್ರಾಹಿ ಗುಣ ಬಾಳಿನ ಮೌಲ್ಯಗಳನ್ನು ಗುರುತಿಸುವ ಸಮರ್ಥ ಸಾಧನ. ನಮ್ಮಲ್ಲಿ ಒಳ್ಳೆಯ ಅಭಿರುಚಿ ಇದ್ದರೆ ಸಾಕು, ಉಳಿದದ್ದು ತಾನಾಗೇ ಸೇರ್ಪಡುತ್ತದೆ. "ಇನಿವಣ್ಗಳಿರೆ ಬಿಸುಟ್ಟೊಯ್ಯನೇ ವನಮಂಪೊಕ್ಕು ಕಾಕಸೋಲ್ವದು ಗಡಬೇವಿನಪಣ್ಣ" ಕವಿ ಷಡಕ್ಷರಿ ಹೇಳುತ್ತಾನೆ. ರಸಪೂರ್ಣವಾದ ಹಣ್ಣುಗಳು ತುಂಬಿದ ತೋಪನ್ನು ಹೊಕ್ಕ ಗಿಳಿ ಹಾಗೂ ಕಾಗೆಗಳ ಅಭಿರುಚಿಯಲ್ಲಿ ಎಷ್ಟು ವ್ಯತ್ಯಾಸ; ಗಿಳಿ ರಸಭರಿತವಾದ ಮಾವಿಗೋ, ದಾಳಿಂಬಕ್ಕೋ ಬಾಳೆಗೋ ಎರಗಿದರೆ, ಕಾಗೆ, ಪಾಪ ಬೇವಿನಹಣ್ಣನ್ನು ತಿನ್ನಲು ಹೋಗುತ್ತದೆ. ಆ ಉತ್ತಮವಾದ ರಸಗ್ರಾಹಿಗುಣ ಕ್ರಿಯಾತ್ಮಕವಾಗಲು ಸಾಧಕ ಬುದ್ಧಿ ಬೇಕು. ಆದಕ್ಕೇ ಕವಿ—ದಾರ್ಶನಿಕ ಡಿ. ವಿ. ಜಿ. ಹೀಗಂದಿದ್ದು:

ದ್ರಾಕ್ಷಿ ರಸವೇನಲ್ಲ ಜೀವನದ ತಿರುಳಾರ್ಗಂ
ಇಕ್ಷುದಂಡದವೊಲದು ಕಷ್ಟಭೋಜನವೆ
ದಕ್ಷತೆಯಿನಿಡಿಯುವಂಗೊಂದೆರಡು ಗುಟುಕುರಸ
ಮೂಕ್ಷಿಕರು ಮಿಕ್ಕೆಲ್ಲ ಮಂಕುತಿಮ್ಮ.

ಕಬ್ಬನ್ನು ತಿನ್ನುವುದು ದ್ರಾಕ್ಷಿ ತಿನ್ನುವಷ್ಟು ಸುಲಭವಲ್ಲ. ಅದಕ್ಕೆ ಸಾಹಸ ಕ್ರಿಯೆ ಬೇಕು. ಹಾಗೆಯೇ ಜೀವನದ ಸತ್ತ್ವ ಬೇಕು ಎನ್ನುವವರು ಕ್ರಿಯಾಶಾಲಿಗಳಾಗಬೇಕು.

ಸಮುದ್ರದ ನೊರೆತೆರೆಗಳಲ್ಲಿ ಆಡಿ, ಮೇಲೆ ಮೇಲೆ ಅರಸುವವನಿಗೆ ಸಿಕ್ಕುವುದು ಕೇವಲ ಕಪ್ಪೆಚಿಪ್ಪು, ಗುಳ್ಳೆಗೊರಜೆ, ಅಷ್ಟೆ. ಸಮುದ್ರದೊಳಗೆ ಮುಳುಗಿ ಅರಸಬಲ್ಲ ಸಾಹಸಿಗೆ ದೊರೆಯುವುದು ಮುತ್ತು ರತ್ನ. ಈ ಬಾಳ್ಗಡಲಿನಲ್ಲಿ ಅನರ್ಘ್ಯ ರತ್ನಗಳಿವೆ; ಬದುಕನ್ನು ಸಹ್ಯವಾಗಿಸುವ ಮೌಲ್ಯಗಳಿವೆ. ಅವುಗಳನ್ನು ಕಂಡುಕೊಳ್ಳುವ ಆದರ್ಶ ನಮ್ಮದಾಗಬೇಕು. (ಆಕಾಶವಾಣಿ ಕೃಪೆ)

# ಮರಳಿ ಬಂದ ಸೌಭಾಗ್ಯ

—ಶ್ರೀಮತಿ ಬಿ. ಎಸ್. ಜಯಾಶಂಕರ್

ಇಲ್ಲಿಯವರೆಗೆ............

ಚಂದ್ರಪ್ಪನವರ ಮಗ ಮೋಹನ್ ಮಡದಿಯನ್ನು ಮನೆದುಂಬಿಸಿಕೊಳ್ಳಲು ಮೈಸೂರ ಕಡೆಗೆ ಪ್ರಯಾಣ ಬೆಳಸಿದನು. ವಿಜಯನು ಉಷಾ ಮತ್ತು ಮೋಹನ್‌ರ ವಿವಾಹವನ್ನು ಮುಗಿಸಿಕೊಂಡು ತನ್ನ ಊರು ರಾಮನಗರಕ್ಕೆ ಬಂದನು. ತಂದೆಯವರು ತಂದ ಅಲ್ಪವೇತನದಿಂದ ದೊಡ್ಡ ಸಂಸಾರ ನಿರ್ವಹಣೆಯನ್ನು ಹೊತ್ತ ತಾಯಿಯ ಕಷ್ಟ ಎಂದು ಪರಿಹಾರವಾದೀತೋ ಎಂದು ರಜ ಮುಗಿದ ನಂತರ ವಿಜಯನ ಬೆಂಗಳೂರಿಗೆ ಬರುತ್ತಾನೆ. ಓದಿದ ನಂತರ ಉದ್ಯೋಗಾಪೇಕ್ಷೆಯಾದ ವಿಜಯನ, ಪ್ರತಿಭೆಗೆ ತಕ್ಕ ಪುರಸ್ಕಾರವೀಯುವಂತೆ, ಪ್ರೊಫೆಸರ್‌ರ ಸಹಾನುಭೂತಿಯಿಂದ 350ರೂಪಾಯಿ ಸಂಬಳದ ಉದ್ಯೋಗ ದೊರೆಯುತ್ತದೆ. ಆಗುವುದೆಲ್ಲ ಒಳ್ಳೆಯದಕ್ಕೆ ಎಂಬಂತೆ ಸಮಯಕ್ಕಾದ ಸದಾನಂದನನ್ನು ಬೀಳ್ಕೊಡು, ನಾಳಿನ ಬಂಗಾರದ ಭವಿಷ್ಯ ಸೂಚನೆಯಂತೆ ಸಹೋದರನೊಡನೆ 'ಬಂಗಾರದ ಮನುಷ್ಯ' ಚಿತ್ರಕ್ಕೆ ವಿಜಯ ಭೇಟಿ ಕೊಟ್ಟನು.......

ಒಂದು ಸಂಜೆ ಹಣ್ಣುಕಾಯಿ ತೆಗೆದುಕೊಂಡು ಮೈಸೂರಿನ ಆರಾಧ್ಯ ದೇವತೆ ಚಾಮುಂಡೇಶ್ವರಿಯ ತಾಣಕ್ಕೆ ಮೋಹನ, ಉಷಾ ಹೊರಟರು. ಇಬ್ಬರ ಮನಸ್ಸೂ ಒಂದುಗೂಡಿ ಹಾಲಿಗೆ ಜೇನು ಸೇರಿದಂತಿತ್ತು. ಮಡದಿಯ ಕೈಹಿಡಿದು ಮೋಹನ ಹೇಳಿದ. ನಡದೇ ಬೆಟ್ಟವನ್ನು ಹತ್ತೋಣ ಹಿಂದುರುಗಿ ಬರುವಾಗ ಬಸ್ಸಿನಲ್ಲೇ ಬರೋಣ ಆಗಬಹುದೇ ? ಎಂದ. ಪತಿಯ ಮಾತಿಗೆ ಪ್ರಕೃತಿಯ ಸೊಬಗನ್ನು ನೋಡುತ್ತಾ ತನ್ನ ಇನಿಯನೊಡನೆ ನಡೆಯುತ್ತಾ ಹೋಗುವುದೆಂದರೆ ಅವಳಿಗೂ ಸಂತಸವೇ. ಹಾಗೇ ಆಗಲಿ ಅದೇ ನನಗೂ ಇಷ್ಟ ಎಂದು ಹೇಳಿದಳು ಉಷೆ.

ಇಬ್ಬರೂ ಹತ್ತಿರದ ಹೋಟೆಲಿನಲ್ಲಿ ಕಾಫಿ ಕುಡಿದರು. ಮೋಹನ್ ತಿಂಡಿ ಪೊಟ್ಟಣ ಕಟ್ಟಿಸಿಕೊಂಡು ಬ್ಯಾಸ್ಕೆಟ್ಟಿಗೆ ಹಾಕಿದ. ನಂತರ ಬೆಟ್ಟಕ್ಕೆ ಹೋಗುವ ದಾರಿಯನ್ನು ಹಿಡಿದು ಸಾಗಿದರು. ಪ್ರಕೃತಿ ಮಾತೆ ತನ್ನ ಚೆಲುವಿನಿಂದ ಕಂಗೊಳಿಸುತ್ತಿದ್ದಳು. ಸುತ್ತಲೂ ನಿಸರ್ಗವೂ ಹಚ್ಚ ಹಸುರಿನಿಂದ ರಮಣೀಯವಾಗಿತ್ತು.

ತನ್ನ ಮಡದಿ ಮುಖವನ್ನು ತನ್ನೆಡೆಗೆ ತಿರುಗಿಸಿ ಹೇಳಿದ ' ಇದು ತನ್ನ ಪ್ರೀತಿಯ ಜಾಗ ಚಿಕ್ಕಂದಿನಲ್ಲಿ ಬೇಸರವಾದಾಗೆಲ್ಲಾ ಇಲ್ಲಿ ಬಂದು ಕುಳಿತುಕೊಳ್ಳುತ್ತಿದ್ದೆ, ಹಾಡುತ್ತಿದ್ದೆ, ನಲಿಯುತ್ತಿದ್ದೆ, ಆದರೂ ನೀನು ನನ್ನ ಜೊತೆಯಲ್ಲಿರುವಾಗ ಮತ್ತಷ್ಟು ಶೋಭೆಯಿಂದ ಒಡಮೂಡಿದೆ ಎಂದೆನಿಸುತ್ತಿದೆ ' ಎಂದ. ಅವಳ ಮುಖ ಕೆಂದಾವರೆಯಂತೆ ಅರಳಿತು. ಇನ್ನು ಕತ್ತಲಾಗುವ ವೇಳೆಗೆ ಬೆಟ್ಟವನ್ನು ಹತ್ತಿ ದೇವರ ಸೇವೆಯನ್ನು ಮುಗಿಸಿಕೊಂಡು ಅಲ್ಲಿಂದ ಹೊರಡುವ ಕೊನೆಯ ಬಸ್ಸನ್ನು ಹಿಡಿದು ತಲುಪಬೇಕಾದರೆ ಹೊತ್ತಾಗುವುದೆಂದು ಬೇಗ ಬೇಗನೆ ಹೆಜ್ಜೆ ಹಾಕಿದರು. ದೇವಸ್ಥಾನದ ಬಳಿ ಬರುವಷ್ಟರಲ್ಲಿ ಇವರಂತೆಯೇ ಅನೇಕ ಮಂದಿ ಭಕ್ತಾದಿಗಳು ನೆರೆದಿದ್ದರು. ಪೂಜಾರಿಯ ಕೈಗೆ ಹಣ್ಣು ಕಾಯಿ ಕೊಟ್ಟು ಪಕ್ಕಕೆ ಸರಿದು ನಿಂತಳು ಉಷೆ.

ಅಂದು ತಾಯಿ ಚಾಮುಂಡೇಶ್ವರಿಗೆ ಯಾರೋ ಭಕ್ತರು ಕುಂಕುಮದ ಅಲಂಕಾರ ಮಾಡಿದ್ದರು. ಆವರಣವೆಲ್ಲಾ ಭಕ್ತಿಯಿಂದ ಧನ್ಯತಾಭಾವನೆ ಮೂಡಿ ನಿಂತಿತ್ತು. ಮಂಗಳಾರತಿಯಾದ ಮೇಲೆ ಪೂಜಾರಿಗಳು ಪ್ರಸಾದ ಹಿಡಿದು ಬಂದರು. ದೇವಿಯನ್ನು ನೋಡುತ್ತಾ ಮೈಮರೆತಿದ್ದ ಉಷೆ ಭಕ್ತಿಯಿಂದ ಕೈಜೋಡಿಸಿ ಮನದಲ್ಲೇ ಪ್ರಾರ್ಥಿಸಿದಳು, ಅಮ್ಮಾ ನನಗಾವ ಭಾಗ್ಯವೂ ಬೇಡ ತಾಯಿ, ಈ ಕುಂಕುಮ ಭಾಗ್ಯ ಮಾತ್ರ ಸ್ಥಿರವಾಗಿರಲಿ ' ಎಂದು ದೀನಳಾಗಿ ಬೇಡಿದಳು. ಅಂದು ಏಕೋ ಅವಳಿಗರಿಯದಂತೆ ಕಣ್ಣೀರು ತುಂಬಿತ್ತು. ಕಾರಣ ಅವಳಿಗೆ ಕಾಣದ ಭೀತಿ ಅಂದು ಕಾಡಿತ್ತು. ತನ್ನ ಪತಿಯಾದರೂ ಮಿಲಿಟರಿ ಅಧಿಕಾರಿ, ಯುದ್ಧವೆಂದರೆ ಅವಳಿಗೆ ನಡುಕ. ಪೂಜೆ ಮಾಡಿಸಿ ಪ್ರಸಾದ ತೆಗೆದುಕೊಂಡು ಹೊರಗೆ ಬಂದರು. ಮೋಹನ್ ಹೇಳಿದ, ' ಈಗ ಇನ್ನು 7–30 ಆಗಿದೆ. ಬಸ್ ಬರಲು ಅರ್ಧ ಗಂಟೆ ಟೈಂ ಇದೆ. ಅಲ್ಲಿ ಕಾಣುವ ಬಂಡೆಯ ಮೇಲೆ ಸ್ವಲ್ಪ ಹೊತ್ತು ಕುಳಿತು ವಿಶ್ರಮಿಸೋಣ, ಬೆಳದಿಂಗಳು ಹಾಲು ಚೆಲ್ಲಿದಂತೆ ಹರಡಿದೆ ' ಎಂದ.

ಬಿಳಿಯ ರೇಷ್ಮೆ ಸೀರೆ, ಅದೇ ಬಣ್ಣದ ಬ್ಲೌಸ್ ತೊಟ್ಟಿದ್ದ ಉಷೆ ಆವನ ಕಣ್ಣಿಗೆ ಅಪ್ಸರೆಯಂತೆ ಕಾಣುತ್ತಿದ್ದಳು. ಮುಡಿದಿದ್ದ ಮಲ್ಲಿಗೆಯ ಪರಿಮಳ ಸುತ್ತೆಲ್ಲಾ ಹರಡಿ ಮಾದಕತೆ ತಂದಿತ್ತು. ಬಂಡೆಯ ಮೇಲೆ ಮೊದಲೇ ಹತ್ತಿದ ಮೋಹನ, ಮಡದಿಯ ಕೈ ಹಿಡಿದು ಮೇಲಕ್ಕೆ ಹತ್ತಿಸಿಕೊಂಡ. ಇಬ್ಬರೂ ಕುಳಿತರು. ಬೆಳದಿಂಗಳ ಚೆಲುವು ಮನಸ್ಸನ್ನು ಸೂರೆಗೊಂಡಿತ್ತು. ಯಾವುದೋ ಬೇರೆ ಲೋಕದಲ್ಲಿ ಇರುವಂತೆ ಭಾಸವಾಗುತ್ತಿತ್ತು. ಉಷೆ ಪತಿಗೆ ತಿಂಡಿಪೊಟ್ಟಣ ಬಿಚ್ಚಿ ತಿನ್ನಲು ಕೊಟ್ಟಳು. ಮಗುವಿನಂತೆ ಅವಳ ತೋಳಾಸರೆಯಲ್ಲಿ ಮಲಗಿದ್ದ ಮೋಹನ. ಅವನ ಉಂಗುರದಂತೆ ಸುರುಳಿದ ಕಪ್ಪು ಕೂದಲಿನಲ್ಲಿ ಆಟವಾಡುತ್ತಾ ' ಎಂದೆಂದಿಗೂ ನನ್ನ ನಿಮ್ಮ ಪವಿತ್ರ ಬಂಧನ ಹೀಗೆ ಇರಲಿ ' ಎಂದಳು ಉಷೆ. ಅದರಲ್ಲಿ ಸಂಶಯವೇಕೆ ? ಎಂದ ಮೋಹನ.

ಕನಸಿನ ಲೋಕದಲ್ಲಿ ಮೀಯುತ್ತಿದ್ದ ದಂಪತಿಗಳಿಗೆ ಬಸ್ಸಿನ ಹಾರ್ನ ಎಚ್ಚರಿಸಿತು. ತಕ್ಷಣ ಎದ್ದು ಇಬ್ಬರು ಬಸ್ ನಿಲ್ಲುವ ಜಾಗಕ್ಕೆ ಹೊರಟರು. ಮನೆಗೆ ಬರುವ ವೇಳೆಗೆ 9 ಗಂಟೆಯಾಗಿತ್ತು. ಚಂದ್ರಪ್ಪನವರು ಗೀತೆಯನ್ನು ಓದುತ್ತಿದ್ದರು. ಮಗನ ಧ್ವನಿ ಕೇಳಿ ಬಾಗಿಲು ತೆರೆದರು. ಅಡಿಗೆ ಮಾಡಿಟ್ಟು ಹೋಗಿದ್ದ ಉಷೆ ಇಬ್ಬರನ್ನೂ ಊಟಕ್ಕೆ ಎಬ್ಬಿಸಿದಳು. ಚಂದ್ರಪ್ಪನವರು, ಮೂವರಿಗೂ ಒಟ್ಟಿಗೆ ಬಡಿಸಮ್ಮ, ನೀನೊಬ್ಬಳೇ ಊಟ ಮಾಡಲು ಬೇಸರವಿಲ್ಲವೇ, ಎಂದರು. ಅವರ ವಾತ್ಸಲ್ಯವನ್ನು ಕಂಡು ಮನ ದಲ್ಲೇ ಹರುಷಗೊಂಡಳು ಉಷೆ. ಮೂರು ಮಂದಿಯೂ ಊಟ ಮುಗಿಸಿದರು. ಪಾತ್ರೆಗಳನ್ನು ತೊಳೆದು ಅಡಿಗೆ ಮನೆಯನ್ನು ಸ್ವಚ್ಛಗೊಳಿಸಿ ಮಾವನವರಿಗೂ, ಮೋಹನನಿಗೂ ಹಾಲು ತಂದಿಟ್ಟಳು. ಅಂದಿನ ಪತ್ರಿಕೆ ಓದುತ್ತಿದ್ದ ಮೋಹನ ವಿದ್ಯುತ್ ಸ್ಪರ್ಶವಾದಂತೆ ದಿಗ್ಗನೆ ಎದ್ದ. ತಂದೆಯೆಡೆಗೆ ತಿರುಗಿ ಅಪ್ಪಾ, ಮತ್ತೆ ಪಾಕಿಸ್ತಾನಿಯರ ನೀಚತನ ಮರುಕಳಿಸಿದೆ. ಈ ಸಾರಿ ಮಾತ್ರ ಬಿಡಲಾರೆವು. ಭಾರತಮಾತೆಯ ವೀರ ಪುತ್ರರಾದ ನಾವು ಅವರಿಗೆ ಬುದ್ಧಿ ಕಲಿಸುವೆವು. ಚೀಣಾದ ಹೊಸ ಅಸ್ತ್ರ ಹೊಂದಿರಲಿ, ಅಮೇರಿಕಾದ ಬೆಂಬಲ ಸಾಕಷ್ಟಿರಲಿ, ಭಾರತದ ಈ ಸಿಂಹಗಳ ಮುಂದೆ ಅವರ ಆಟ ವೇನೂ ಸಾಗದು. ಪ್ರಾಣವನ್ನೇ ಪಣವಾಗಿಟ್ಟು ಕೆಚ್ಚೆದೆಯಿಂದ ಹೋರಾಡುವ ನಮ್ಮ ವೀರ ಜವಾನರಿಗೆ ಅವೆಲ್ಲಾ ತೃಣ ಪ್ರಾಯ' ಎಂದು, ಆ ಕುನ್ನಿಗಳು ಅರಿತಿಲ್ಲ, ಮತ್ತೆ ಮತ್ತೆ ನಮ್ಮ ಪೌರುಷವನ್ನು ಕೆಣಕುತ್ತಿದ್ದಾರೆ. ಭಾರತಮಾತೆಗೆ ಅವಮಾನವೆಸಗಲು ಹವಣಿಸುತ್ತಿದ್ದಾರೆ. ಆಕೆಯ ಮಕ್ಕಳಾದ ನಾವು ಹೇಡಿಗಳಲ್ಲ' ಎಂಬುದನ್ನು ರಣರಂಗ ದಲ್ಲಿ ತೋರಿಸುತ್ತೇವೆ.

ಆಗ ಅವನನ್ನು ನೋಡಿದ ಉಷೆಗೆ 'ವೀರ ಅಭಿಮನ್ಯು'ವಿನ ನೆನಪಾಯಿತು. ಅವನ ಕಣ್ಣುಗಳು ಕ್ರೋಧತಪ್ತವಾಗಿ ಕೆಂಡದುಂಡೆಗಳಂತೆ ಪ್ರಜ್ವಲಿಸುತ್ತಿದ್ದವು.

ಕೂಡಲೇ ಎದ್ದು ತನ್ನ ಸಾಮಾನುಗಳನ್ನು ಹೋಲ್ಡಾಲ್‌ಗೆ ತುಂಬಿದನು. ಇದ ನ್ನೆಲ್ಲಾ ಗರಬಡಿದವಳಂತೆ ನೋಡುತ್ತಿದ್ದಳು ಉಷೆ. ತನ್ನ ಸಿದ್ಧತೆಯೆಲ್ಲಾ ಮುಗಿದ ಮೇಲೆ ಅವನ ಗಮನ ವೃದ್ಧ ತಂದೆಯ ಕಡೆಗೆ ಹರಿಯಿತು. ತಂದೆಯ ದುಃಖತಪ್ತ ವಾದ ಮುಖ ಅವನನ್ನು ಒಮ್ಮೆ ಚಿಂತೆಗೀಡುಮಾಡಿತು. ತನ್ನ ಬಾಳನ್ನು ತುಂಬಲು ನಗುನಗುತ್ತಾ ಕೈಹಿಡಿದು ಬಂದ ಮಡದಿಯ ಭಯಮಿಶ್ರಿತವಾದ ಕಂಗೆಟ್ಟ ಮುಖ ಅವ ನನ್ನು ಈಟಿಯಿಂದ ತಿವಿದಂತಾಯಿತು. ಆದರೆ ಅದು ಕ್ಷಣಮಾತ್ರ, ಕರ್ತವ್ಯದ ಕರೆ ಯಾವ ಬಂಧನಕ್ಕೂ ಸಿಲುಕಿಸಲಿಲ್ಲ. ನಮ್ಮ ದೇಶ ಸ್ವಾತಂತ್ರ್ಯ ಹೊಂದಬೇಕಾದರೆ ಎಷ್ಟು ಮಂದಿ ಮಾತೆಯರು ತಮ್ಮ ಪುತ್ರರತ್ನಗಳನ್ನು ಕಳೆದುಕೊಳ್ಳಬೇಕಾಯಿತು. ಎಷ್ಟು ಮಂದಿ ಸತಿಯರು ಮಾಂಗಲ್ಯಭಾಗ್ಯಗಳನ್ನು ಹರಿದೊಗೆಯಬೇಕಾಯಿತು. ಅಂದಿನ ಎಲ್ಲರ ತ್ಯಾಗದಿಂದಲ್ಲವೇ ಈ ಸ್ವಾತಂತ್ರ್ಯ. ಅದನ್ನು ರಕ್ಷಿಸುವ ಹೊರೆ ನಮ್ಮ

ದಲ್ಲವೆ? ಸತ್ತರೆ ವೀರಸ್ವರ್ಗ, ಬದುಕಿದರೆ ವೀರಬಾಳ್ವೆ, ಎಂದು ಅವನಾರಿಸಿದ್ದು ಈ ಬಾಳನ್ನೇ. ಈ ಎಲ್ಲ ಚಿಂತೆಗಿಂತಲೂ ಅವನಿಗೆ ದೇಶಪ್ರೇಮವೇ ಹೆಚ್ಚಾಯಿತು. ತಂದೆಗೆ ನಮಸ್ಕರಿಸಿದ, ಆದರೆ ಅವರ ಚೇತನವೇ ಉಡುಗಿಹೋಗಿತ್ತು.

ಮಡದಿಯ ಬಳಿ ಬಂದು, ಶಿಲಾಬಾಲಿಕೆಯೇ ಆಗಿದ್ದ ಅವಳನ್ನು ಎಚ್ಚರಿಸಿದ ಮೋಹನ, 'ಉಷಾ, ನೀನು ನನ್ನ ವೀರಪತ್ನಿಯಲ್ಲವೇ? ಧೈರ್ಯದಿಂದ ನನ್ನನ್ನು ಕಳುಹಿಸಿಕೊಡು. ದೇವಿಯ ದಯೆಯಿಂದ ಎಂತಹ ಕಷ್ಟದಲ್ಲಿಯೂ ಪಾರಾಗಿ ಬರುವೆ. ಈ ದಿನವೆ 12 ಗಂಟೆಗೆ ಹೊರಡುವ ರಾತ್ರಿಯ ಎಕ್ಸ್‌ಪ್ರೆಸ್ ಗಾಡಿಹಿಡಿದು ಹೋಗಬೇಕಾಗಿದೆ. ರಜೆಯಲ್ಲಿ ಬಂದವರು ಪತ್ರಿಕೆ ನೋಡಿದಾಕ್ಷಣವೇ ಹೊರಟು ಬರಬೇಕೆಂದು ನಮ್ಮ ದಂಡನಾಯಕರ ತುರ್ತು ಸಂದೇಶ ತಡಮಾಡುವ ಸಮಯವಲ್ಲ. ತಂದೆಯವರ ಬಗ್ಗೆ ಆಸಕ್ತಿಯಿಂದ ನೋಡಿಕೋ, ಯಾವ ಚಿಂತೆಗೂ ಆಸ್ಪದಕೊಡಬೇಡ. ನಿನ್ನ ಅಣ್ಣನವರಿಗೆ ಈ ವಿಷಯ ತಿಳಿಸು. ನಗುನಗುತ್ತಾ ನನ್ನನ್ನು ಕಳುಹಿಸು. ಅದೇ ನನ್ನ ಶ್ರೀರಕ್ಷೆ' ಎಂದ.

ಉಷೆಗೆ ಅವುದೋ ಶಕ್ತಿ ಮೈಗೂಡಿದಂತಾಯಿತು. ಒಳಗೆ ಹೋಗಿ ದೇವರ ದೀಪವನ್ನು ಹಚ್ಚಿದಳು. ಆರತಿ ಮಾಡಿದಳು, ಹೊರಟು ನಿಂತ ಪತಿಗೆ ಬೆಳಗಿ ಕಾಲಿಗೆರಗಿದಳು. ಅವಳನ್ನು ಎಬ್ಬಿಸಿ ಆಲಿಂಗಿಸುತ್ತಾ ಹೇಳಿದ ಮೋಹನ, 'ಇದೀಗ ನೀನು ವೀರಸತಿ, ಮತ್ತೆ ನಾನು ಬಂದಾಗ ಹೀಗೆಯೇ ಸ್ವಾಗತಿಸು, ಪತ್ರ ಬರೆಯುತ್ತಿರುವೆ ಹೆದರಬೇಡ, ನೀನೇ ನನ್ನ ಧೈರ್ಯಲಕ್ಷ್ಮಿ, ಹೊತ್ತಾಯಿತು ಬರಲೇ' ಎಂದ. ಉಷೆಗೆ ಮಾತನಾಡಲು ನಾಲಿಗೆಯೇ ಬರಲಿಲ್ಲ, ತಲೆಯಲ್ಲಾಡಿಸಿದಳು. ತಂದೆಯ ಕಡೆ ನೋಡಿದ, ಅವರ ನೋಟ ಚಾಮುಂಡಾಂಬೆಯ ಫೋಟೋದಲ್ಲಿ ನೆಲೆಸಿತ್ತು. ಅವರಿಗೆ ಮತ್ತೆ ದುಃಖ ಉಂಟುಮಾಡಲು ಮನಸ್ಸಾಗದೇ ಬಾಗಿಲಲ್ಲೇ ನಿಂತು ಮಡದಿಗೆ ಕೈ ಬೀಸುತ್ತಾ ನಡೆದ ಆ ಕೇಸರಿ.

ಉಷೆಗೆ ಆ ಸಮಯದಲ್ಲಿ ಕಣ್ಣೀರು ಹಾಕುವುದು ಸರಿಯಲ್ಲವೆಂದು ಎಷ್ಟು ತಡೆದರೂ ಸಾಧ್ಯವಾಗಲಿಲ್ಲ. ದೇವರ ಮನೆಯಲ್ಲಿ ಕೈಜೋಡಿಸಿ ಕುಳಿತವಳಿಗೆ ಜ್ಞಾನವೇ ಇರಲಿಲ್ಲ. ಚಂದ್ರಪ್ಪನವರಿಗೆ ಸಮಾಧಾನ ಮಾಡುವ ಧೈರ್ಯವೇ ಇರಲಿಲ್ಲ. ಮೂಕವಾಗಿ ರೋಸಕತೊಡಗಿದರು. ಅಂದಿನಿಂದ ಬಲವಂತವಾಗಿ ಊಟ ಮಾಡುವರು, ಅದೂ ಒಂದು ಹೊತ್ತು ಮಾತ್ರ. ಉಷೆಯಾದರೋ ನಿತ್ಯವೂ ಸ್ನಾನಮಾಡಿ ಲಲಿತಾ ಸಹಸ್ರನಾಮ, ಗೌರಿಪೂಜೆ ವ್ರತ ಹಿಡಿದಳು. ಗಂಟೆಗಟ್ಟಲೆ ದೇವರ ಮುಂದೆ ಕುಳಿತು ಪತಿಗೆ ಶ್ರೇಯಸ್ಸನ್ನು ಕೋರುವಳು. ತಿಂದರೆ ಕೇವಲ ದೇವರಿಗೆ ನೈವೇದ್ಯಮಾಡಿದ ಹಾಲು ಹಣ್ಣು, ಒಂದೊಂದು ವೇಳೆ ಅದೂ ಇಲ್ಲ. ಚಂದ್ರಪ್ಪನವರು ಎಲ್ಲಾ ವಿಷಯಗಳನ್ನು ಸುಧೀರನಿಗೆ ಪತ್ರ ಬರೆದು ಬಂದು ಹೋಗಲು ತಿಳಿಸಿದರು.

ವಿಷಯ ತಿಳಿದ ಸುಧೀರ್ ಹೌಹಾರಿದ, 8 ದಿನ ರಜೆ ಹಾಕಿ ತಾಯಿಯೊಡನೆ ಮೈಸೂರಿಗೆ ಬಂದ. ಮಗಳನ್ನು ನೋಡಿ ತಾಯಿಯ ಕರುಳು ಮಿಡಿಯಿತು. ಆದರೆ ಮೊದಲೇ ಮಗನ ಆದೇಶದಂತೆ ಆಕೆ ಹೆಚ್ಚಿಗೆ ದುಃಖವನ್ನು ತೋರ್ಪಡಿಸದೇ ಧೈರ್ಯ ಹೇಳಿದಳು.

ಸುಧೀರನಾದರೂ ಕಾಲಿಗೆರಗಿದ ತಂಗಿಯನ್ನು ಮೇಲೆತ್ತಿದ, ಆದೇ ತಾನೇ ಪೂಜೆ ಮುಗಿಸಿ ಬಂದಿದ್ದ ಅವಳ ಮೊಗದಲ್ಲಿ ಅಪೂರ್ವ ತೇಜಸ್ಸು ತುಂಬಿತ್ತು. ಮುಖದಲ್ಲಿ ಹರಿಷಿಣ, ಕುಂಕುಮ ಶೋಭಿಸುತ್ತಾ, ಸಾತ್ವಿಕ ಕಳೆಯನ್ನು ಕೊಟ್ಟಿತ್ತು. ತಂಗಿಯನ್ನು ಕುರಿತು ಹೇಳಿದ, ಎರಡು ಮೂರು ಸಾರಿ ಯುದ್ಧದಲ್ಲಿ ಭಾಗವಹಿಸಿದ್ದ ನಿನ್ನ ಪತಿಗೆ ಅನುಭವ ಚೆನ್ನಾಗಿದೆ, ಖಂಡಿತವಾಗಿ ಏನೂ ಆಗದು, ಜಯ ದೊರಕಿಸಿಕೊಂಡೇ ಬರುತ್ತಾನೆ, ಇದರಲ್ಲಿ ಸಂದೇಹಬೇಡ', ಎಂದ ಸುಧೀರ್. ತಂಗಿಯನ್ನು ಸಂತೈಸಿ ಚಂದ್ರಪ್ಪನವರ ಕೋಣೆಗೆ ನಡೆದ. ಅವರು ಬರೆಯುವುದರಲ್ಲಿ ನಿರತರಾಗಿದ್ದರು. ಇವನನ್ನು ನೋಡಿ, ನಿಮ್ಮನ್ನೇ ಕಾಯುತ್ತಿದ್ದೆ ಬನ್ನಿ ಎಂದರು.

ಮದುವೆಯಲ್ಲಿ ನೋಡಿದ್ದಕ್ಕೂ, ಈಗ ನೋಡುವುದಕ್ಕೂ ಕೇವಲ ಒಂದು ತಿಂಗಳಿಗೇ, ಬಹಳ ಇಳಿದು ಹೋದಂತೆ ಕಾಣುತ್ತಿದ್ದ ಅವರ ಮುಖ ಬಾಡಿತ್ತು. ಇದುವರೆಗೂ ತಡೆಹಿಡಿದಿದ್ದ ದುಃಖಾಶ್ರುಗಳು ಉದುರಿದವು. ಸುಧೀರನಿಗೆ ಏನು ಹೇಳಲೂ ತೋಚಲಿಲ್ಲ. ಕಡೆಗೆ 'ನೀವೇ ದುಃಖಿಸುತ್ತಾ ಕುಳಿತರೆ ನನ್ನ ತಂಗಿಯನ್ನು ಸಂತೈಸುವವರು ಯಾರಿದ್ದಾರೆ ಯೋಚಿಸಿನೋಡಿ' ಎಂದ. ನಾನು ದುಡುಕಿದೆನೋ ಎನ್ನಿಸುತ್ತಿದೆ. ನಾನಾದರೂ ಹಣ್ಣೆಲೆ ಇನ್ನು ಬಾಳಿನ ವಸಂತಮಾಸಕ್ಕೆ ಕಾಲಿಡುತ್ತಿರುವ ಹದಿನಾರು ವಯಸ್ಸಿನ ಕಿಶೋರಿ ಉಷಳ ಬಾಳಿಗೆ ಏನಾದರೂ ವಿಪತ್ತು ಬಂದರೆ ನಾನು ಹೇಗೆ ಸಹಿಸಲಿ ನೀವೇ ಹೇಳಿ ಎಂದು ರೋಧಿಸತೊಡಗಿದರು.

ನಿಮ್ಮ ಮಗನಿಗೆ ಯಾವ ತೊಂದರೆಯೂ ಆಗುವುದಿಲ್ಲ, ಇಲ್ಲದ ಸಂಶಯಪಡುತ್ತೀರಿ' ಹಿರಿಯರಾದ ನೀವು ಹೀಗೆ ಅಧೈರ್ಯ ಪಟ್ಟರೆ ಹೇಗೆ, ಧೈರ್ಯದಿಂದ ಉಷಳಿಗೂ ಸ್ವಲ್ಪ ಸಮಾಧಾನಮಾಡಿ ಎಂದ ಸುಧೀರ. ಅಷ್ಟರಲ್ಲಿ ತಿಂಡಿಯ ತಟ್ಟೆಯನ್ನು ಹಿಡಿದು ರೂಮಿಗೆ ಬಂದಳು ಉಷೆ. ಸುಧೀರ ಚಂದ್ರಪ್ಪನವರಿಗೆ ತಾನೇ ತೆಗೆದುಕೊಟ್ಟ. 'ನನಗೇಕಪ್ಪ, ಸಾಯುವ ಜೀವಕ್ಕೆ, ನೀನು ಉಷೆ ತೆಗೆದುಕೊಳ್ಳಿರಿ; ಎಂದು ಚಂದ್ರಪ್ಪನವರು ಹೇಳಿದರು. ನೀವು ತೆಗೆದುಕೊಳ್ಳಿ ಮಾವಯ್ಯ ನಾವೂ ತೆಗೆದುಕೊಳ್ಳುತ್ತೇವೆ' ಎಂದಳು ಉಷೆ. ನಿಮ್ಮ ಅಣ್ಣನಿಗೂ ತಿಂಡಿಯನ್ನು ಇಲ್ಲಿಯೆ ತಂದುಕೊಡು, ಸ್ವಲ್ಪ ಹೊರಗಡೆ ಹೋಗಿ ಬರುತ್ತೇವೆ ಎಂದು ಚಂದ್ರಪ್ಪನವರು ಹೇಳಿದರು.

ಸುಧೀರ ಜೊತೆ ಹೊರನಡೆದರು, ದಾರಿಯಲ್ಲಿ ಈಗ ನಾವು ಎಲ್ಲಿಗೆ ಹೋಗು ವುದು ಎಂದು ಕೇಳಿದ ಸುಧೀರ್. ಬನ್ನಿ ಹೇಳುತ್ತೇನೆ, ಎಂದು ತಮ್ಮ ಲಾಯರ್ ವಿಶ್ವನಾಥಂ ಬಳಿ ಕರೆದೊಯ್ದರು. ಈ ಪರಿಸ್ಥಿತಿ ಯಲ್ಲೂ ಅವರ ಕರ್ತವ್ಯ ಪ್ರಜ್ಞೆಯನ್ನು ಕಂಡು ವಿಸ್ಮಯವಾಯಿತು. ಇವರನ್ನು ನೋಡಿ ವಿಶ್ವನಾಥ್ ಹಸ್ತಲಾಘವವನ್ನಿತ್ತು ತಮ್ಮ ಆಫೀಸ್ ಕೋಣೆಗೆ ಕರೆದೊಯ್ದರು.

ಚಂದ್ರಪ್ಪನವರು ಮೊದಲೇ ಎಲ್ಲ ವಿಷಯಗಳನ್ನು ಅವರಿಗೆ ತಿಳಿಸಿದ್ದರು. ಅಂತೆಯೇ ವಿಲ್ ಬರೆಯಲು ಸಿದ್ಧರಾದರು. ಮೈಸೂರಿನಲ್ಲಿರುವ ಮನೆ, ನಾಲೆಯ ಕೆಳಗಿದ್ದ 2 ಎಕರೆ ಗದ್ದೆ ಹಾಗೂ ಬ್ಯಾಂಕಿನಲ್ಲಿದ್ದ 50 ಸಾವಿರ ರೂ, ಹಣವನ್ನು ತಮ್ಮ ಸೊಸೆಯ ಹೆಸರಿಗೆ ಬರೆಸಿದರು. ಲಾಯರ್ ವಿಶ್ವನಾಥ್‌ರವರು 4, 5 ಮಂದಿ ಪ್ರತಿಷ್ಠಿತರ ಸಾಕ್ಷಿ ಹಾಕಿಸಿ ಇನ್ನೂ 16 ವರ್ಷದ ಉಷಾಳಿಗೆ ಗಾರ್ಡಿಯನ್ (Guardian) ಆಗಿ ಸುಧೀರನನ್ನು ಹೆಸರಿಸಿದರು. ಆದರಂತೆ ಅವನು ತಲೆಬಾಗಲೇ ಬೇಕಾಯಿತು. ಇಷ್ಟು ಅರ್ಜೆಂಟಾಗಿ ಇದನ್ನೆಲ್ಲಾ ಏಕೆ ಮಾಡಿಸಿದರು ಎಂದು, ಅವನು ಯೋಚಿಸಿದ. ಮೋಹನ್ ಬಂದಮೇಲೆ ಈ ವಿಷಯದಲ್ಲಿ ಏನಾದರೂ 'ತಪ್ಪು ತಿಳಿದರೆ,' ಎಂದು ಚಂದ್ರಪ್ಪನವರನ್ನು ಪ್ರಶ್ನಿಸಿದ. 'ತನ್ನ ಮಗ ಅಂತಹವನಲ್ಲ' ಇನ್ನೂ ಸಂತೋಷಪಡುವನಲ್ಲದೆ ತಪ್ಪಾಗಿ ಭಾವಿಸಲಾರ. 'ನೀವು ನಿಶ್ಚಿಂತರಾಗಿ' ಎಂದರು ಚಂದ್ರಪ್ಪನವರು.

'ಈ ವಿಷಯ ಸ್ವಲ್ಪದಿನ ಗುಟ್ಟಾಗಿರಲಿ' ಆ ಹೆಣ್ಣು ಮಗಳು ಬೇರೆ ಏನಾದರೂ ಭಾವಿಸಿಯಾಳು' ಎಂದು ಹೇಳಿದರು. ಮರುದಿನ ಬೆಳಗ್ಗೆ ಸೊಸೆಯನ್ನು ಕರೆದು ಹೇಳಿದರು,' ಇಂದು ನಿನ್ನ ಕೈಯಲ್ಲಿ ಸಿಹಿ ಅಡಿಗೆ ಊಟ ಮಾಡಬೇಕೆನಿಸಿದೆಯಮ್ಮ, ಈ ಮುದುಕನ ಮಾತಿಗೆ ಇಲ್ಲವೆನ್ನಬೇಡ,' ಎಂದರು. ಆದರೆ ತನ್ನ ಪತಿ ರಣರಂಗದಲ್ಲಿ ಯಾವ ತೊಂದರೆಯಲ್ಲಿ ಸಿಲುಕಿದ್ದಾರೋ ? ಮಾವನವರ ಮನಸ್ಸಿನಲ್ಲಿ ಏನಿದೆಯೋ ಎಂದು ಕೊಂಡು, 'ಆಗಲಿ, ಮಾವಯ್ಯ ಮಾಡುತ್ತೇನೆ, ಎಂದು ಹೊರಹೊರಟಳು. ತಾಯಿಯನ್ನು ಕರೆದು, ಇಂದು ನೀನೆ ಅಡಿಗೆ ಮಾಡು ಎಂದು ಹೇಳಿ, ನಾನು ಮಾವನವರಿಗೆ ಪೂಜೆಗೆ ಅಣಿ ಮಾಡಿ, ಈ ದಿನ ಮುತ್ತೈದೆಯರಿಗೆ ಹೂ ವೀಳ್ಯ ಕೊಡಬೇಕೆಂದಿರುವೆ, ನನ್ನ ಪತಿಗೆ ಶ್ರೇಯಸ್ಸಾಗಲಿ, ಆ ಜಗನ್ಮಾತೆ "ರಕ್ಷಿಸಲಿ" ಎಂದು ನನ್ನ ಆಸೆ ಎಂದಳು. ಎಂದೂ ಮಾವನವರು ಈ ರೀತಿ ಆಸೆ ಪಟ್ಟವರಲ್ಲ, ಅವರ ಆಸೆ ಪೂರೈಸುವುದು ಸೊಸೆಯಾದ ನನ್ನ ಕರ್ತವ್ಯ, ಎಂದು ಕೊಂಡು, ಸಿಹಿ ಅಡಿಗೆ ಮಾಡಲು ತಿಳಿಸಿ ಹಣ್ಣು–ಕಾಯಿ ತರಲು ಅಣ್ಣನನ್ನು ಪೇಟೆಗೆ ಕಳುಹಿಸಿದಳು.

(ಮುಂದುವರಿಯುವುದು)

LICENCED TO POST WITHOUT PRE PAYMENT LICENCE NO.
Registered with the Registrar of News papers for India un
No. 17139/6
Siddaganga Monthly Magazine Siddaganga Mutt.
Reg No. KRN Q-



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.